

## ಕನ್ನಡ ವಿಶ್ವವಿದ್ಯಾನಿಲಯ
ಹಂಪಿ

೨೦೧೩-೨೦೧೪ ನೇ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# ನವೋದಯ ಕವಿಗಳು ಕಂಡ ಗಾಂಧೀ


ನಿಬಂಧಕಾರರು

**ಶ್ರೀ ವಿಜಯ**

**ನೋಂ. ಸಂ. : KVTMKS – 00೬೬೭**

ಕನ್ನಡ ಎಂ.ಫಿಲ್ ವಿದ್ಯಾರ್ಥಿ (ಹಂಪಿ ಕನ್ನಡ ವಿವಿ)
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಎಸ್. ಮಹೇಶ್ವರಿ**

ಕನ್ನಡ ಸಹ ಪ್ರಾಧ್ಯಾಪಕರು
ಜೆ.ಎಸ್.ಎಸ್. ಮಹಿಳಾ ಕಾಲೇಜು
ಚಾಮರಾಜನಗರ





**ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್**
ಜಯಲಕ್ಷ್ಮೀಪುರಂ, ಮೈಸೂರು

೨೦೧೩-೨೦೧೪




ಕನ್ನಡ ವಿಶ್ವವಿದ್ಯಾನಿಲಯ

ಹಂಪಿ


೨೦೧೩-೨೦೧೪ ನೇ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸುತ್ತಿರುವ ಸಂಶೋಧನಾ ನಿಬಂಧ

# ನವೋದಯ ಕವಿಗಳು ಕಂಡ ಗಾಂಧೀ


ನಿಬಂಧಕಾರರು

**ಶ್ರೀ ವಿಜಯ**

**ನೋಂ. ಸಂ. : KVTMKS – ೦೦೬೬೭**

ಕನ್ನಡ ಎಂ.ಫಿಲ್ ವಿದ್ಯಾರ್ಥಿ (ಹಂಪಿ ಕನ್ನಡ ವಿ.ವಿ.)

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

**ಡಾ. ಎನ್. ಮಹೇಶ್ವರಿ**

ಕನ್ನಡ ಸಹ ಪ್ರಾಧ್ಯಾಪಕರು

ಜೆ.ಎಸ್.ಎಸ್. ಮಹಿಳಾ ಕಾಲೇಜು

ಚಾಮರಾಜನಗರ



ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

೨೦೧೩- ೨೦೧೪

# ದೃಢೀಕರಣ ಪತ್ರ

೨೦೧೩–೧೪ನೇ ಸಾಲಿನಲ್ಲಿ ಕ್ರಮಸಂಖ್ಯೆ **KVTMKS – ೦೦೬೬೭ರ** ಹಂಪಿ ವಿಶ್ವವಿದ್ಯಾನಿಲಯದ ಎಂ.ಫಿಲ್ ಪದವಿಯ ವಿದ್ಯಾರ್ಥಿಯಾದ **ವಿಜಯ** ಅವರು ನನ್ನ ಮಾರ್ಗದರ್ಶನದಲ್ಲಿ **"ನವೋದಯ ಕವಿಗಳು ಕಂಡ ಗಾಂಧೀ"** ಎಂಬ ಶೀರ್ಷಿಕೆಯ ನಿಬಂಧವನ್ನು ಎಂ.ಫಿಲ್ ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಮೊದಲು ಯಾವುದೇ ಬಗೆಯ ಡಿಪ್ಲೊಮಾ ಅಥವಾ ತತ್ಸಮಾನ ಪದವಿಗಳಿಗಾಗಿ ಯಾವ ವಿಶ್ವವಿದ್ಯಾನಿಲಯಕ್ಕೂ ಸಲ್ಲಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ಮೈಸೂರು

ದಿನಾಂಕ : ೦೫.೦೭.೩೦೧೪

(ಡಾ.ಎನ್. ಮಹೇಶ್ವರಿ)

ಸಹ ಪ್ರಾಧ್ಯಾಪಕರು
ಕನ್ನಡ ವಿಭಾಗ
ಜೆ.ಎಸ್.ಎಸ್. ಮಹಿಳಾ ಕಾಲೇಜು
ಚಾಮರಾಜನಗರ

# ಅಭ್ಯರ್ಥಿಯ ಘೋಷಣಾ ಪತ್ರ

**"ನವೋದಯ ಕವಿಗಳು ಕಂಡ ಗಾಂಧೀ"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಕನ್ನಡ ಎಂ.ಫಿಲ್ ಪದವಿಯ ಕ್ರಮಸಂಖ್ಯೆ **KVTMKS – ೦೦೬೬೭೮** ವಿದ್ಯಾರ್ಥಿಯಾದ ನಾನು ೨೦೧೩–೧೪ನೆ ಸಾಲಿನ ಪರೀಕ್ಷೆಗಾಗಿ ಡಾ.ಎನ್. ಮಹೇಶ್ವರಿ ಸಹಪ್ರಾಧ್ಯಾಪಕರು, ಕನ್ನಡ ವಿಭಾಗ, ಜೆ.ಎಸ್.ಎಸ್. ಮಹಿಳಾ ಕಾಲೇಜು, ಚಾಮರಾಜನಗರ ಇವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಡಿಸಿದ್ದೇನೆ.

ಪ್ರಸ್ತುತ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾನಿಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮಾ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ಮೈಸೂರು

(ವಿಜಯ)

ದಿನಾಂಕ : ೦೫.೦೭.೨೦೧೪

೨೦೧೩–೧೪ನೇ ಸಾಲಿನ ಕನ್ನಡ ಎಂ.ಫಿಲ್ ವಿದ್ಯಾರ್ಥಿ
ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

## "ನವೋದಯ ಕವಿಗಳು ಕಂಡ ಗಾಂಧೀ"

### ಪರಿವಿಡಿ

ಅಧ್ಯಾಯ – ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

**ಪೀಠಿಕೆ:**

ಮಾನವನ ಬದುಕು ನಿಂತ ನೀರಲ್ಲ, ವಿಕಾಸಶೀಲ. ಬದುಕು ಬೆಳೆದಂತೆ, ಬದಲಿಸಿದಂತೆ, ಹೊಸದಾದಂತೆ ಅದರಿಂದ ಅಭಿವ್ಯಕ್ತವಾದ ಸಾಹಿತ್ಯವು ಅನಿವಾರ್ಯವಾಗಿ ಬೆಳೆಯುತ್ತದೆ, ಹೊಸತನವನ್ನು ಅಳವಡಿಸಿಕೊಳ್ಳುತ್ತದೆ.

ಸಾವಿರಾರು ವರ್ಷಗಳ ಇತಿಹಾಸ ಸಮೃದ್ಧಿಗಳುಳ್ಳ ಕನ್ನಡ ಸಾಹಿತ್ಯ ಸಹ ಇದಕ್ಕೆ ಹೊರತಲ್ಲ. ಕನ್ನಡ ಸಾಹಿತ್ಯವು ಕಾಲದಿಂದ ಕಾಲಕ್ಕೆ ಹಲವಾರು ಸ್ಥಿತ್ಯಂತರಗಳನ್ನು ಪಡೆದುಕೊಂಡು ಸಾಗಿಬಂದಿದೆ. ಆಯಾ ಕಾಲದ ಸಾಹಿತ್ಯದ ಧೋರಣೆಗಳು ತತ್ಪೂರ್ವದ ಸಾಹಿತ್ಯ ಪರಂಪರೆಯೊಂದಿಗೆ ಸವಾಲಾಗಿ ನಿಲ್ಲುವ ಮತ್ತು ಸ್ಪಷ್ಟವಾಗಿ ಗುರುತಿಸಬಹುದಾದ ಬದಲಾವಣೆಗಳನ್ನು ಆಶಯದಲ್ಲಿ ಮತ್ತು ಅಭಿವ್ಯಕ್ತಿಯಲ್ಲಿ ಸಾಧಿಸಿದೆ. ಹೀಗಾಗಿ ಅದು ವಿಶಿಷ್ಟತೆಯನ್ನು ಪಡೆದುಕೊಂಡಿದೆ.

ಪ್ರಾಚೀನ ಕನ್ನಡ ಸಾಹಿತ್ಯದಿಂದ, ಆಧುನಿಕ ಕನ್ನಡ ಸಾಹಿತ್ಯದವರೆಗೆ ಹಲವು ಮಹತ್ವದ ಕವಿಗಳು, ಸಾಹಿತಿಗಳು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ತಮ್ಮ ಅಮೂಲ್ಯ ಕೊಡುಗೆ ನೀಡಿದ್ದಾರೆ. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಕಾವ್ಯ ಮತ್ತು ಶಾಸ್ತ್ರ ಕೃತಿಗಳ ರಚನೆ ಪ್ರಧಾನವಾಗಿ ಕಂಡು ಬಂದರೆ, ಆಧುನಿಕ ಕಾಲದಲ್ಲಿ ಕವನ, ಕಾವ್ಯ, ಭಾವಗೀತೆ, ನಾಟಕ, ಕಾದಂಬರಿ, ಪ್ರಬಂಧ, ಮಹಾಕಾವ್ಯ, ವಿಮರ್ಶೆ ಮುಂತಾದವು ಕಂಡುಬರುತ್ತವೆ. ಮುಖ್ಯವಾಗಿ ಆಧುನಿಕ ಕನ್ನಡ ಸಾಹಿತ್ಯದಲ್ಲಿ ನವೋದಯ ಕಾವ್ಯದ ಫಸಲು ಸಮೃದ್ಧವಾಗಿದೆ. ಈ ಯುಗದಲ್ಲಿ ಕಾವ್ಯ ಪ್ರಕಾರವು ಹೆಚ್ಚು ಶ್ರೀಮಂತಗೊಂಡಿರುವುದನ್ನು ಕಾಣಬಹುದಾಗಿದೆ.

ಆಧುನಿಕ ಕನ್ನಡ ಕಾವ್ಯ ಪರಂಪರೆಯ ಆರಂಭ ಕಾಲದ ಪ್ರಮುಖ ಚಿಂತನೆಗಳು, ಪಾಶ್ಚಾತ್ಯ ರಮ್ಯ ಸಾಹಿತ್ಯದ ಪ್ರಭಾವಕ್ಕೆ ವಿಶೇಷವಾಗಿ ಒಳಗಾಗಿದೆ. ರಾಷ್ಟ್ರಪ್ರೇಮ, ನಾಡು – ನುಡಿಗಳ ಬಗೆಗಿನ ಅಭಿಮಾನ ಅಂದಿನ ಮುಖ್ಯ ಕಾಳಜಿಯಾಯಿತು. ಸ್ವಾತಂತ್ರ್ಯ ಸಂಗ್ರಾಮ, ಗಾಂಧಿವಾದ, ಗಾಂಧಿ ವ್ಯಕ್ತಿತ್ವ ಮೊದಲಾದ ಅಂಶಗಳಲ್ಲದೆ ದಾಸ್ಯ ನಿವಾರಣೆಯ ಚಿಂತನೆಗಳು ಆ ಕಾಲದ ಮುಖ್ಯ ಪ್ರೇರಣೆಗಳಾದವು.

ಇಂಗ್ಲೀಷ್ ವಿದ್ಯಾಭ್ಯಾಸದ ಮೂಲಕ ಪಡೆದ ಹೊಸ ಅರಿವು, ರಾಷ್ಟ್ರದಾದ್ಯಂತ ಸ್ವಾತಂತ್ರ್ಯಕ್ಕಾಗಿ ನಡೆಯುತ್ತಿದ್ದ ಹೋರಾಟ, ವ್ಯಕ್ತಿತ್ವವಾಗುತ್ತಿದ್ದ ನಡೆನುಡಿಗಳನ್ನು ಕುರಿತ ಅಭಿಮಾನ ಇವು ಕನ್ನಡ ನವೋದಯ ಸಾಹಿತ್ಯದಲ್ಲಿ ಸಹಜವಾಗಿಯೇ ಪ್ರಾಮುಖ್ಯತೆ ಪಡೆದಿವೆ. ಸ್ವತಂತ್ರ ಭಾರತದ ಕನಸು ಅಂದಿನ ಅನೇಕ ಲೇಖಕರ ಕಣ್ಣಮುಂದಿತ್ತು. ನಾಡಿನ ಪರಂಪರೆಯ ಅರಿವು ಮೂಡಿಸುವ, ತನ್ಮೂಲಕ ರಾಷ್ಟ್ರಪ್ರೇಮವನ್ನು ಜಾಗೃತಗೊಳಿಸುವ ಹೆಗ್ಗುರಿ ಬರಹಗಾರರ ಮೇಲಿತ್ತು. ಆಧುನಿಕ ಕನ್ನಡ ಕಾವ್ಯದ ಆರಂಭ ಕಾಲವೇ ಸ್ವಾತಂತ್ರ್ಯ ಸಂಗ್ರಾಮದ ಕಾಲವಾಗಿತ್ತು. ಭಾರತದ ಚರಿತ್ರೆಯ ಈ ಪ್ರಮುಖ ಘಟ್ಟದಲ್ಲಿ ಬದುಕಿದ್ದ ಲೇಖಕರು ಈ ಹೋರಾಟದ ಪ್ರತ್ಯಕ್ಷ ಹಾಗೂ ಪರೋಕ್ಷ ಪ್ರಭಾವಕ್ಕೆ ಒಳಗಾಗುವುದು ಅನಿವಾರ್ಯವಾಗಿತ್ತು.

ರಾಷ್ಟ್ರೀಯತೆಯನ್ನು ಜಾಗೃತಗೊಳಿಸುವ, ರಾಷ್ಟ್ರದ ಸ್ವಾತಂತ್ರ್ಯಕ್ಕೆ ಹೋರಾಡುವ, ಛಲವನ್ನು ತುಂಬುವ, ರಾಷ್ಟ್ರನಾಯಕರಲ್ಲಿ ಪ್ರೀತಿ ಗೌರವಗಳನ್ನು ಮೂಡಿಸುವ ಸ್ವತಂತ್ರ ಭಾರತದ ಕನಸನ್ನು ಕಾಣಿಸುವ ಸಾಹಿತ್ಯ ಈ ಅವಧಿಯಲ್ಲಿ ಎಲ್ಲಾ ಭಾಷೆಗಳಲ್ಲಿ ಮೂಡಿ ಬಂದಿದೆ. ಕನ್ನಡ ಸಾಹಿತ್ಯ ಕೂಡ ಇದಕ್ಕೆ ಹೊರತಾಗಿಲ್ಲ. ಇಡೀ ಜಗತ್ತಿನ ಜನರನ್ನು ತನ್ನ ವ್ಯಕ್ತಿತ್ವದಿಂದ ಹಾಗೂ ವಿಚಾರಧಾರೆಯಿಂದ ಸೆಳೆದ ಮಹಾನ್ ಚೇತನ ಮೋಹನದಾಸ ಕರಮಚಂದ ಗಾಂಧೀ. ನವೋದಯ ಕಾಲಘಟ್ಟದ ಕವಿಗಳನ್ನು ಗಾಂಧೀಜಿಯವರ ವ್ಯಕ್ತಿತ್ವ ಹಾಗೂ ವಿಚಾರಧಾರೆ ಪ್ರಭಾವಿಸಿದೆ. ಹಾಗಾಗಿ ಅಂಥ ಅಸೀಮ ಪ್ರಭಾವದ ಅನನ್ಯ ಇರುವಿಕೆಯ ಅಪರೂಪದ ವ್ಯಕ್ತಿಯಾದ ಗಾಂಧೀಯವರನ್ನು ಕನ್ನಡದ ಕವಿಗಳು ಹೇಗೆ ಕಂಡಿದ್ದಾರೆ ಎಂಬ ಕುತೂಹಲವೇ ಈ ಸಂಪ್ರಬಂಧ ರಚನೆಯ ಉದ್ದೇಶವಾಗಿದೆ. ಇಲ್ಲಿಯೇ ಪ್ರಸ್ತುತ ಅಧ್ಯಯನದ ವಿಷಯ, ವ್ಯಾಪ್ತಿಯನ್ನು ವಿವರಿಸಲಾಗುತ್ತದೆ.

**ವಿಷಯ ಪ್ರವೇಶ ಮತ್ತು ಒಳವಿವರಗಳು:**

ಮಹಾಪುರುಷರು ಇತಿಹಾಸದ ಮೇಲೆ ತಮ್ಮ ಅಚ್ಚಳಿಯದ ಪ್ರಭಾವವನ್ನು ಬೀರಿರುವುದು ಚರಿತ್ರೆಯಲ್ಲಿ ಎದ್ದು ಕಾಣುವ ಅಂಶ. ಯುಗ ಯುಗಕ್ಕೂ ವಿಚಾರವಂತರು, ಜ್ಞಾನಿಗಳು, ಸಾಹಸಿಗಳು ಉದ್ಭವಿಸಿದ್ದಾರೆ. ಅವರ ವಿಚಾರ, ಜ್ಞಾನ, ಸಾಹಸ ಕರ್ಮಾದಿಗಳು ಆಯಾ ಕಾಲದ ಆಯಾ ಪ್ರದೇಶದ ಸಮಾಜದ ಮೇಲೆ ಮಾತ್ರವಲ್ಲ, ಇಡೀ ಮಾನವ ಲೋಕದ ಮೇಲೆಯೇ, ಚಿರಕಾಲ ಉಳಿಯುವಂಥ ಪರಿಣಾಮವನ್ನು ಉಂಟುಮಾಡಿವೆ. ಇತಿಹಾಸಕ್ಕೆ ಆಗಿಂದಾಗ್ಗೆ ಹೊಸ ತಿರುವನ್ನು, ಹೊಸ ಕಳೆಯನ್ನು ತಂದುಕೊಟ್ಟಿವೆ.

ಬದುಕಿನ ಕೈಗನ್ನಡಿಯಾದ ಸಾಹಿತ್ಯವೂ ಇಂಥ ಪ್ರಭಾವಗಳಿಂದ ಹೊರತಾಗಿ ನಿಲ್ಲುವುದು ಅಸಾಧ್ಯ. ಅಂತೆಯೆ ಆಯಾ ಕಾಲದ ಲೋಕ ಸಾಹಿತ್ಯ ಆಯಾ ಮಹಾಪುರುಷರ ಆಚಾರ –

ವಿಚಾರಗಳಿಂದ ಪ್ರಭಾವಿತವಾಗಿದೆ, ಪುಷ್ಟಗೊಂಡಿದೆ. ಅಂಥ ವಿಚಾರ ಸಾರ್ವಕಾಲಿಕ ಮಹತ್ವವನ್ನು ಉಳ್ಳದ್ದರಿಂದ, ಸಹಜವಾಗಿಯೆ ಆ ವಿಚಾರವನ್ನು ಒಳಗೊಂಡ ಸಾಹಿತ್ಯವೂ ತಾತ್ಕಾಲಿಕ ಮಾತ್ರವಾಗಿ ಇದ್ದು ಮಾಯವಾಗಿಲ್ಲ; ಸಾರ್ವಕಾಲಿಕವೂ ಚಿರವೂ ಆಗಿ ಉಳಿದುಕೊಂಡು ಬಂದಿದೆ. ನಮ್ಮ ಭಾರತದಲ್ಲಿ ನೋಡಿದರೆ, ರಾಮ, ಕೃಷ್ಣ, ಬುದ್ಧ, ಬಸವೇಶ್ವರರೇ ಮೊದಲಾದವರು ಸಾಹಿತ್ಯದ ವಸ್ತುವಾಗಿ ನೂರಾರು ಉತ್ಕೃಷ್ಟ ಕಾವ್ಯಕೃತಿಗಳಿಗೆ ಪ್ರೇರಕರಾಗಿದ್ದಾರೆ, ಕಾರಣರಾಗಿದ್ದಾರೆ. ಅದರ ಮೂಲಕ ಜನತೆಯ ವಿಚಾರ ಕ್ರಾಂತಿಗೆ, ಜೀವನಶುದ್ಧಿಗೆ ಮಾರ್ಗದರ್ಶಕರಾಗಿದ್ದಾರೆ. ಪಾಶ್ಚಾತ್ಯ ಸಾಹಿತ್ಯ ಲೋಕದಲ್ಲಿ, ಫ್ರಾಯ್ಡ್‌ನ ಮನೋವಿಜ್ಞಾನ, ಡಾರ್ವಿನ್ನನ ವೈಜ್ಞಾನಿಕ ತತ್ತ್ವ, ಮಾರ್ಕ್ಸ್‌ನ ಆರ್ಥಿಕ ಸಾಮಾಜಿಕ ಸಿದ್ಧಾಂತಗಳು ಎಬ್ಬಿಸಿದ ಬಿರುಗಾಳಿ ಇನ್ನೂ ಬೀಸುತ್ತಲೇ ಇದೆ; ಅವರ ಕಾಲದಿಂದ ಪ್ರಸ್ತುತ ಸಾಹಿತ್ಯ ವಿಚಾರವನ್ನೆಲ್ಲ ಆವರಿಸಿಬಿಟ್ಟಿದೆ. ಅದೇ ಝುಳವನ್ನು ಇಂದು ಪೌರ್ವಾತ್ಯ ಸಾಹಿತ್ಯದಲ್ಲೂ ಕಾಣಬಹುದು.

ಗಾಂಧೀಜಿ ಇತಿಹಾಸ ನಿರ್ಮಾಪಕರಲ್ಲೊಬ್ಬರು. ನಾಡಿಗೆ ಮುಸುಕಿದ್ದ ಮಬ್ಬು ಮಂಕುಗಳನ್ನು ಓಡಿಸಿ, ಕಳೆಯನ್ನೂ ಚೇತನವನ್ನೂ ತುಂಬಿದ ಧೀಮಂತ. ಮಸಿ ಹಿಡಿದು ಕೂತಿದ್ದ ದೀಪದ ಗಾಜನ್ನು ಉಜ್ಜಿ ತೊಳೆದು ಒಳಗಿನ ಬೆಳಕು ಪ್ರಜ್ವಲಿಸುವಂತೆ ಮಾಡಿದ ಮಹಾಪುರುಷ. ಈ ಶತಮಾನದಲ್ಲಿ ಅವರಷ್ಟು ಪ್ರಭಾವಶಾಲಿಯಾದ ಮಾನವ ಇನ್ನೊಬ್ಬನಿಲ್ಲ. ಸಿರಿ, ಬಲ, ಅಧಿಕಾರ ಅಥವಾ ಪ್ರಚಂಡ ಸಾಹಿತ್ಯ ಯಾವುದೇ ಅವಲಂಬನವೂ ಇಲ್ಲದೆ, ಕೇವಲ ಆತ್ಮಶಕ್ತಿಯ ಬಲದಿಂದ, ಸತ್ಯನಿಷ್ಠೆಯಿಂದ ಇಡೀ ಜನಾಂಗದಲ್ಲೆ ಚೈತನ್ಯದ ಝುರಿಯನ್ನು ಉಕ್ಕಿಸಿ, ವಿಶ್ವದಲ್ಲೆ ಅತಿ ಬಲಿಷ್ಠ ಎನಿಸಿದ್ದ ರಾಷ್ಟ್ರವನ್ನು ಅಹಿಂಸೆ ಪ್ರೇಮಗಳಿಂದಲೇ ಎದುರಿಸಿ ಗೆದ್ದು ಲೋಕಕ್ಕೆ ಹೊಸ ದಾರಿಯನ್ನು, ಹೊಸ ಬೆಳಕನ್ನು ತೋರಿದ ಈ ಮಾನವ – ಮಹಾತ್ಮ. ಈ ಸಾಮಾನ್ಯ ವ್ಯಕ್ತಿ, ಅಸಾಮಾನ್ಯ ಶಕ್ತಿ!

ಇಂಥ ವ್ಯಕ್ತಿಯ ಜೀವನ ಹಾಗೂ ವಿಚಾರಗಳು ಸಾಹಿತ್ಯ ಲೋಕದಲ್ಲೂ ಬೆಳಗುವುದು ಸಹಜವೇ. ಅಂತೆಯೆ ಈ ಶತಮಾನದ ಭಾರತೀಯ ವಾಙ್ಮಯ ಗಾಂಧೀಮಯವಾಗಿರುವುದರಲ್ಲಿ ಆಶ್ಚರ್ಯವೇನಿಲ್ಲ. ಹಿಂದಿ, ಮರಾಠಿ, ಗುಜರಾತಿ, ಬಂಗಾಳಿ ಯಾವುದೇ ಭಾಷೆಯಲ್ಲಾಗಲಿ, ಗಾಂಧೀಜಿಯ ಬಗ್ಗೆ ಸಮೃದ್ಧವಾದ ವಿಭಾಗ ಇದ್ದೇ ಇದೆ. ಕನ್ನಡದಲ್ಲೂ ಸಾಕಷ್ಟು ಗಾಂಧೀ ಸಾಹಿತ್ಯ ಸೃಷ್ಟಿಯಾಗಿದೆ.

ಕನ್ನಡ ಕವಿತಾಲೋಕದಲ್ಲಿ ಗಾಂಧೀಜಿ ಬಗ್ಗೆ ಮುಖ್ಯವಾದ ಭಾಗ ಉಂಟು. ಮುಳಿಯ ತಿಮ್ಮಪ್ಪಯ್ಯನವರಂಥ ಹಳಬರಿಂದ ಹಿಡಿದು ಇಂದಿನ ನವ್ಯ ಕವಿಗಳವರೆಗೆ ನೂರಾರು ಜನ ತಮ್ಮ ಕಾವ್ಯದ ಕಾಣಿಕೆಯನ್ನು ಅರ್ಪಿಸಿದ್ದಾರೆ. ವಿಷಯ ವೈವಿಧ್ಯ, ಛಂದೋ ವೈವಿಧ್ಯ, ದೃಷ್ಟಿ

ವೈವಿಧ್ಯಗಳಿಂದ ಸಮೃದ್ಧವಾಗಿದೆ. ಈ ಪ್ರಕಾರ ಗೋವಿಂದ ಪೈಗಳ ಧೀರ ಗಂಭೀರ ಕವನಗಳು, ಡಿ.ವಿ.ಜಿಯವರ ಉದಾತ್ತ ಪದ್ಯಗಳು, ಮಾಸ್ತಿ, ಮುಗಳಿ, ವಿ.ಸೀ.ಯವರ ಸರಳಗೀತೆಗಳು, ಬೇಂದ್ರೆಯವರ ನಾದಮಯವೂ ಅರ್ಥಮಯವೂ ಆದ ಗೀತೆಗಳು, ಕುವೆಂಪು ಅವರ ಕಾವ್ಯ ಗುಚ್ಛ, ಪು.ತಿ.ನ., ನರಸಿಂಹಸ್ವಾಮಿ ಅವರ ಕವನದ ಮಾಲೆಗಳು, ಅಡಿಗರ ದೀರ್ಘ ನವ್ಯ ಕವಿತೆ, ಜಯದೇವಿ ತಾಯಿ ಲಿಗಾಡೆ, ಸಾಲಿ ರಾಮಚಂದ್ರರಾಯ, ಅರ್ಚಕ ವೆಂಕಟೇಶ, ತೀನಂಶ್ರೀ, ರಾಜರತ್ನಂ, ಭಾರತೀ ದಾಮೋದರ ಬಾಳಿಗಾ, ಎಂ.ವಿ. ಸೀತಾರಾಮಯ್ಯ, ಪರಮೇಶ್ವರಭಟ್ಟ, ಚಿತ್ತಾಲ, ಪಾಂಡವೇಶ್ವರ, ಆನಂದಕಂದ, ಕಣವಿ, ಎಕ್ಕುಂಡಿ, ರಾಜಗೋಪಾಲ, ಮುಗಳಿ, ಶಿವರುದ್ರಪ್ಪ, ಈಶ್ವರ ಸಣಕಲ್ಲ, ಸಿಂಪಿ ಲಿಂಗಣ್ಣ ಮುಂತಾದ ಅನೇಕ ಹಿರಿಯ – ಕಿರಿಯರ ಕವನ ಕಾಣಿಕೆಗಳು ಕನ್ನಡ ಭಂಡಾರವನ್ನು ತುಂಬಿವೆ. ಡಿ.ವಿ.ಜಿ.ಯವರ 'ಇಂದ್ರಿಯಂಗಳ ಜಯಿಸಿ', ಪು.ತಿ.ನ. ಅವ 'ನೆರಳು', ಬೇಂದ್ರೆಯವರ 'ಶ್ರದ್ಧಾಂಜಲಿ', ಕುವೆಂಪು ಅವರ 'ಬಾಷ್ಪಾಂಜಲಿ', ಶಿವರುದ್ರಪ್ಪನವರ 'ಕಂಡದ್ದು ಮೂರು ಸಲ' ಕರ್ಕಿಯವರ 'ದಿವ್ಯಜ್ಯೋತಿ' ಇಂಥವೆಲ್ಲ ಅತ್ಯುತ್ತಮ ಕೃತಿಗಳು. ಕೈಲಾಸಂ ಅವರ ಒಂದು ಇಂಗ್ಲಿಷ್ (ಕನ್ನಡಕ್ಕೆ ಜಿ.ಪಿ. ರಾಜರತ್ನಂರಿಂದ) ಪದ್ಯವಂತೂ ವಿಶಿಷ್ಟ ಸೊಗಡಿನಿಂದ ಕೂಡಿದೆ.

ಭರತಖಂಡದ ವೇದಿಕೆಯ ಮೇಲೆ ಗಾಂಧೀಜಿಯವರು ಆಗಮಿಸಿದುದನ್ನೂ, ಅವರು ಪ್ರಭಾವ ಬೀರಿದುದನ್ನೂ ಜವಾಹರಲಾಲ್ ನೆಹರೂ ಅವರು ತಮ್ಮ 'ಡಿಸ್ಕವರಿ ಆಫ್ ಇಂಡಿಯಾ'ದ ಚಿರಸ್ಮರಣೀಯ ಭಾಗವೊಂದರಲ್ಲಿ ಹೀಗೆ ವರ್ಣಿಸಿದ್ದಾರೆ : "ಗಾಂಧೀಜಿಯವರು ನಿಶ್ಚೇತನ ದೇಹಕ್ಕೆ ಜೀವದುಸಿರು ಕೊಟ್ಟು ಅಂಗಾಂಗಗಳಿಗೆ ಚಲನಶಕ್ತಿ ಕೊಡುವ ಶುಭ್ರಗಾಳಿಯಂತೆ ಕತ್ತಲೆ ಗಡಿಯೊಳಗೆ ತೂರಿಬಂದು ನಮ್ಮ ಕಣ್ಣ ಪೊರೆ ತೆಗೆದ ಬೆಳಕಿನ ಕಿರಣದಂತೆ, ಅನೇಕ ವಸ್ತುಗಳನ್ನು ಅರಳಿಸಿ ಜನ ಮನವನ್ನು ಅಲ್ಲೋಲಕಲ್ಲೋಲ ಮಾಡಿದ ಬಿರುಗಾಳಿಯಂತೆ ಬಂದರು. "ಅಷ್ಟೇ ಅಲ್ಲ, "ಅವರು ಹಿಂಬಾಲಕರಲ್ಲಷ್ಟೇ ಅಲ್ಲದೆ ತಮ್ಮ ವಿರೋಧಿಗಳಲ್ಲೂ ಮತ್ತು ಯಾವುದನ್ನು ಯೋಚಿಸಬೇಕು ಮತ್ತು ಯಾವುದನ್ನು ಮಾಡಬೇಕು ಎಂಬ ಸಂಕಲ್ಪವನ್ನು ಮಾಡದಿದ್ದ ತಟಸ್ಥ ವ್ಯಕ್ತಿಗಳಲ್ಲೂ ವ್ಯಾಪಕವಾದ ಮಾನಸಿಕ ಕ್ರಾಂತಿಯುಂಟು ಮಾಡಿದರು". ಗಾಂಧೀಜಿಯವರ ಈ ವ್ಯಾಪಕ ಪ್ರಭಾವ, ಅವರು ದಕ್ಷಿಣ ಆಫ್ರಿಕಾದಿಂದ ಭಾರತಕ್ಕೆ ಮರಳಿದ ಅನಂತರದ ಮೂರೂವರೆ ದಶಕಗಳ ನಾಡಿನ ಇತಿಹಾಸವನ್ನು ಗಾಂಧಿಯುಗವನ್ನಾಗಿ ಪರಿವರ್ತಿಸಿತು. ಈ ಹೇಳಿಕೆ ಆ ಕಾಲದ ಸಾಹಿತ್ಯಕ್ಕಷ್ಟೇ ಅಲ್ಲದೆ ರಾಷ್ಟ್ರೀಯ ಚಟುವಟಿಕೆಯ ಇತರ ಕ್ಷೇತ್ರಗಳಿಗೂ ಅನ್ವಯವಾಗುತ್ತದೆ. ಗಾಂಧೀಜಿಯವರು ನಾಡಿನ ಜನರ ಬುದ್ಧಿಯನ್ನೂ ಮತ್ತು ಹೃದಯವನ್ನೂ ಎಷ್ಟರ ಮಟ್ಟಿಗೆ ಆಕ್ರಮಿಸಿಕೊಂಡರೆಂದರೆ ರಾಷ್ಟ್ರೀಯ ಚಟುವಟಿಕೆಯ ಯಾವೊಂದು ಅಂಗವೂ ಅವರ ಪ್ರಭಾವಕ್ಕೆ ಒಳಗಾಗದೆ ಇರುವ ಹಾಗಿರಲಿಲ್ಲ. ಜನಮನದ ಅಭಿವ್ಯಕ್ತಿಯಂತಿರುವ ಸಾಹಿತ್ಯವೂ ಈ ಪ್ರಭಾವವನ್ನು ತಪ್ಪಿಸಿಕೊಳ್ಳಲಾಗಲಿಲ್ಲ.

ನವೋದಯ ಸಾಹಿತ್ಯದ ಮೇಲೆ ಗಾಂಧೀಜಿಯವರ ಪ್ರಭಾವ ಎಂದರೆ ಮುಖ್ಯವಾಗಿ ಅದರ ಮೇಲೆ ಅವರ ವಿಚಾರಗಳು ಪ್ರಭಾವ ಎಂದರ್ಥ. ಈ ಶತಮಾನದ ಎರಡನೆಯ ದಶಕದಲ್ಲಿ ಗಾಂಧೀಜಿಯವರ ವಿಚಾರ ಸರಣಿಗಳಿಂದ ತುಂಬಿರುವ ಸಾಹಿತ್ಯ ಗಣನೀಯ ಪ್ರಮಾಣದಲ್ಲಿ ಸೃಷ್ಟಿಯಾಗಿದ್ದೆ. ಸಾಮಾಜಿಕ ಮತ್ತು ಆರ್ಥಿಕ ಪುನರ್ ರಚನೆ, ಗ್ರಾಮೀಣ ಜೀವನ, ಸ್ತ್ರೀಯರ ಉದ್ಧಾರ, ಮದ್ಯಪಾನ, ಅಸ್ಪೃಶ್ಯತೆ ಮತ್ತು ಜಾತೀಯತೆಗಳಂತಹ ದುಷ್ಪದ್ಧತಿಗಳ ನಿವಾರಣೆ – ಇವೇ ಮೊದಲಾದವುಗಳ ಬಗ್ಗೆ ನಮ್ಮ ಲೇಖಕರು ಹೊಸ ಉತ್ಸಾಹವನ್ನು ತೋರಿದರು. ಈ ಬಗೆಯ ಅನೇಕ ಹೊಸ ವಿಷಯಗಳು ನಮ್ಮ ಎಲ್ಲ ಸ್ತರಗಳ ಸಾಹಿತ್ಯದಲ್ಲಿ ತಲೆದೋರಿದವು. ಹೊಸವಸ್ತು, ಹೊಸಮಾನವೀಯತೆ ಇವುಗಳಿಂದ ತುಂಬಿದ ಸಾಃಇತ್ಯ ಶ್ರೀಮಂತಗೊಂಡಿತು. ಇಷ್ಟೇ ಅಲ್ಲ, ಈ ಬೆಳವಣಿಗೆಗಳಿಂದಾಗಿ ಒಂದು ಬಗೆಯ ಹೊಸಶೈಲಿ – ಸರಳವೂ, ನೇರವೂ, ಅಲಂಕಾರರಹಿತವೂ ಮತ್ತು ಮೂಲಭೂತವಾಗಿ ಕಾರ್ಯಾತ್ಮಕವೂ ಅಂದರೆ ಉದ್ದೇಶ ಸಾಧನೆಗೆ ನೆರವಾಗುವಂತಹದೂ ಆದ ಹೊಸ ಶೈಲಿ – ಅನಿವಾರ್ಯವಾಗಿ ಹುಟ್ಟಿಕೊಂಡಿತು. ಕನ್ನಡ ಸಾಹಿತ್ಯ ಇದಕ್ಕೆ ಅಪವಾದವಾಗಲಿಲ್ಲ, ಆಗುವುದು ಸಾಧ್ಯವೂ ಇರಲಿಲ್ಲ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಗಾಂಧೀವಾದವನ್ನು ಗುರುತಿಸುವುದು ಈ ನನ್ನ ಸಂಪ್ರಬಂಧದ ಉದ್ದೇಶವಲ್ಲ. ಅದು ಹೆಚ್ಚು ನಿರ್ದಿಷ್ಟವಾಗಿದೆ. ಅಲ್ಲದೆ ಗಾಂಧೀಜಿಯವರಿಗೇ ನೇರವಾಗಿ ಸಂಬಂಧಪಟ್ಟಿದ್ದೆ. ಗಾಂಧೀಜಿಯವರ ವ್ಯಕ್ತಿತ್ವ ಕನ್ನಡದ ಹಾಗೂ ಭಾರತದ ಇತರ ಭಾಷೆಗಳ ಲೇಖಕರನ್ನು ರೋಮಾಂಚನಗೊಳಿಸಿತು. ಅಷ್ಟೇ ಅಲ್ಲ, ಅವರ ಹೃದಯವನ್ನೂ, ಕಲ್ಪನೆಯನ್ನೂ ಸೂರೆಗೊಂಡಿತು. ಪ್ರೀತಿಯಿಂದ, ಮೆಚ್ಚಿಕೆಯಿಂದ ಮತ್ತು ಗೌರವದಿಂದ ಅವರ ಬಗ್ಗೆ ಬರೆಯುವಂತೆ ಅವರನ್ನು ಪ್ರಚೋದಿಸಿತು. ಮಹಾನಾಯಕನ ಬಗ್ಗೆ ಮತ್ತು ಆತನ ಕೃತಿಗಳ ಹಾಗೂ ಉಪದೇಶಗಳ ಬಗ್ಗೆ ವೈವಿಧ್ಯಮಯ ಪ್ರತಿಕ್ರಿಯೆಗಳು ನಮ್ಮ ಎಲ್ಲ ಪ್ರಸಿದ್ಧ ಲೇಖಕರಲ್ಲೂ ಹಾಗೂ ಅಸಂಖ್ಯಾತ ಸಾಮಾನ್ಯ ಲೇಖಕರಲ್ಲೂ ಕಂಡುಬರುತ್ತವೆ. ಮಹಾತ್ಮರ ಬಗ್ಗೆ ಈ ಲೇಖಕರ ಪ್ರತಿಕ್ರಿಯೆಗಳನ್ನೂ ಮತ್ತು ಮೌಲ್ಯ ನಿರ್ಣಯಗಳನ್ನೂ ಸಂಗ್ರಹಿಸುವುದು ಸಂತೋಷಕರ ಅನುಭವ. ಕಾರಣ ಇಷ್ಟೆ : ಅವರನ್ನು ಕುರಿತ ಪರ ಮತ್ತು ವಿರೋಧವಾದ ಬರವಣಿಗೆ ದಾಖಲಾಗದಿದ್ದರೂ ಪರವಾದಂತಹ ಬರವಣಿಗೆಗಳೇ ಅತ್ಯಂತ ಹೆಚ್ಚಾಗಿ ದಾಖಲಾಗಿವೆ. ಈ ಲೇಖಕರು ಜನತೆಯ ಅನುಭವ ಮತ್ತು ಪ್ರತಿಕ್ರಿಯೆಗಳ ಚೇತನಬಿಂದುಗಳಂತಿರುವುದರಿಂದ ಇವು ಅವರ ವೈಯಕ್ತಿಕ ಅನುಭವಗಳನ್ನಷ್ಟೇ ಅಲ್ಲದೆ ಜನಸಾಮಾನ್ಯರ ಭಾವನೆಗಳನ್ನೂ ಪ್ರತಿನಿಧಿಸುತ್ತವೆ.

ತಾವು ನಡೆಸಿದ ಜೀವನದಿಂದಲೂ, ವ್ಯಕ್ತಪಡಿಸಿದ ಅಭಿಪ್ರಾಯಗಳಿಂದಲೂ ಗಾಂಧೀಜಿಯವರು ತಮ್ಮ ದೇಶದ ಜನತೆಯ ಗಮನ ಸೆಳೆದರು. ಅವರು ಮೊದಲು ಮಹಾತ್ಮಾ ಗಾಂಧೀಯಾದರು.

ಅನಂತರ ರಾಷ್ಟ್ರಪಿತರಾದರು. ದಕ್ಷಿಣ ಆಫ್ರಿಕಾದಿಂದ ಸ್ವದೇಶಕ್ಕೆ ಮರಳಿದ ಈ ನಿರಾಶ್ರಿತ ಅನತಿಕಾಲದಲ್ಲಿಯೇ ತಮ್ಮ ಸ್ವಾರ್ಥ, ತ್ಯಾಗ ಮತ್ತು ತಮ್ಮ ಕಠಿಣ ನಿಯಮಗಳಿಂದ ಜನರ ಕಲ್ಪನೆಯನ್ನೇ ಸೂರೆಗೊಂಡರು. ರಾಷ್ಟ್ರೀಯ ಆಂದೋಲನದ ಹೊಸ ನಾಯಕರಾದ ಗಾಂಧೀಜಿಯವರು ಮಹಾತ್ಮರೂ ಆದರು. ಅಷ್ಟೇ ಅಲ್ಲ, ತಮ್ಮ ಸ್ವಂತ ಸ್ವಭಾವದಿಂದಾಗಿ ಜನತೆಯ ಗೌರವಕ್ಕೆ ಪಾತ್ರರಾದರು. ಗಾಂಧೀಜಿಯ ವ್ಯಕ್ತಿತ್ವದ ಈ ಮುಖ ಸ್ವದೇಶ ಹಾಗೂ ವಿದೇಶಗಳಲ್ಲಿ ಸಾರ್ವತ್ರಿಕ ಗೌರವವನ್ನು ಪಡೆದುಕೊಂಡಿತು. ಪೂಜ್ಯ ಭಾವದಿಂದ, ನಮ್ರತೆಯಿಂದ, ಮೆಚ್ಚುಗೆಯಿಂದ ಮತ್ತು ಆಶ್ಚರ್ಯದಿಂದ ಕೂಡಿದ ಭಾಷೆಯಲ್ಲಿ ಮಹಾತ್ಮರ ಬಗ್ಗೆ ತಮ್ಮ ಅಭಿಪ್ರಾಯವನ್ನು ಅಭಿವ್ಯಕ್ತಗೊಳಿಸುವಲ್ಲಿ ಕನ್ನಡ ಸಾಹಿತಿಗಳು ಇತರ ಭಾಷೆಗಳ ಸಾಹಿತಿಗಳಿಗಿಂತ ಹಿಂದೆ ಬೀಳಲಿಲ್ಲ, ಗಾಂಧೀಜಿಯವರನ್ನು ಕುರಿತ ಮೊದಲ ಉಲ್ಲೇಖಗಳು ಅವರ ಪ್ರಶಂಸೆಯನ್ನು ಒಳಗೊಂಡಿವೆ. ಇದೇ ಅವರನ್ನು ಇತರ ನಾಯಕರಿಂದ ಪ್ರತ್ಯೇಕಿಸಿ ಬುದ್ಧ ಮತ್ತು ಕ್ರಿಸ್ತರಂಥ ವ್ಯಕ್ತಿಗಳ ಸಾಲಿನಲ್ಲಿ ಇರಿಸುವುದಕ್ಕೆ ಕಾರಣವಾದುದು. ಹಾಗಾಗಿ ಅಂತಹ ದಿಟ್ಟ ಮಹಾನ್ ಚೇತನವನ್ನು ಕುರಿತು ನವೋದಯ ಕವಿಗಳು ಚಿತ್ರಿಸಿದ ಗಾಂಧೀಜಿಯ ಚಿತ್ರಣಗಳನ್ನು ಈ ಸಂಪ್ರಬಂಧದಲ್ಲಿ ಅಧ್ಯಯನಕ್ಕೆ ಅನುಕೂಲವಾಗುವಂತೆ ಒಟ್ಟು ಆರು ಅಧ್ಯಾಯಗಳಾಗಿ ವಿಂಗಡಿಸಿಕೊಂಡಿರುತ್ತೇನೆ.

**ಅಧ್ಯಾಯಗಳ ವಿಂಗಡಣೆ :**

ಅಧ್ಯಾಯ – ೧ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ ಈ ಅಧ್ಯಾಯವು ಪ್ರಸ್ತುತ ವಿಷಯದ ಆಯ್ಕೆಯ ಮಹತ್ವ ಈ ಕುರಿತು ಆ ಕ್ಷೇತ್ರದಲ್ಲಿ ನಡೆದಿರುವ ಅಧ್ಯಯನ ಹಾಗೂ ಅಧ್ಯಯನದ ಉದ್ದೇಶವನ್ನು ಸ್ಪಷ್ಟಪಡಿಸುತ್ತದೆ. ನವೋದಯ ಕವಿಗಳು ಕಂಡ ಗಾಂಧೀಜಿಯವರ ಚಿತ್ರಣಗಳನ್ನು ಕುರಿತು ಅಧ್ಯಯನ ಮಾಡುವುದು ಈ ಪ್ರಸ್ತುತ ನಿಬಂಧದ ಮುಖ್ಯ ಉದ್ದೇಶವಾಗಿದೆ. ಇಲ್ಲಿಯೇ ಪ್ರಸ್ತುತ ಅಧ್ಯಯನದ ವಿಷಯ ವ್ಯಾಪ್ತಿಯನ್ನು ಸಂಶೋಧನಾ ದೃಷ್ಟಿಯಿಂದ ವಿವೇಚಿಸಲಾಗಿದೆ.

ಅಧ್ಯಾಯ – ೨ ನವೋದಯ ಕಾವ್ಯದಲ್ಲಿ ಪ್ರಸ್ತಾಪಿತವಾದ ವಿವಿಧ ವಿಚಾರಗಳು ಎಂಬ ನಿಬಂಧದ ಎರಡನೆ ಅಧ್ಯಾಯದಲ್ಲಿ ನವೋದಯ ಕಾವ್ಯದ ಹಿನ್ನೆಲೆ ಹಾಗೂ ನವೋದಯ ಕಾವ್ಯದಲ್ಲಿ ಪ್ರಸ್ತಾಪಿತವಾದ ವಿವಿಧ ವಿಚಾರಗಳನ್ನು ಕುರಿತು ಸಂಕ್ಷಿಪ್ತವಾಗಿ ವಿವೇಚಿಸಲಾಗಿದೆ.

ಅಧ್ಯಾಯ – ೩ ಸ್ವಾತಂತ್ರ್ಯಪೂರ್ವ ನವೋದಯ ಕವನಗಳಲ್ಲಿ ಗಾಂಧೀಜಿ ಚಿತ್ರಣ ಎಂಬ ಮೂರನೇ ಅಧ್ಯಾಯದಲ್ಲಿ ಸ್ವಾತಂತ್ರ್ಯ ಪೂರ್ವ ನವೋದಯ ಕವನಗಳಲ್ಲಿ

ಕವಿಗಳು ಕಂಡ ಗಾಂಧೀಜಿಯ ಚಿತ್ರಣವನ್ನು ಪ್ರಾತಿನಿಧಿಕ ಕವನಗಳನ್ನು ವಿಶ್ಲೇಷಣೆಗೆ ಒಳಪಡಿಸುವ ಮೂಲಕ ದಾಖಲಿಸುವ ಪ್ರಯತ್ನ ಮಾಡಲಾಗಿದೆ

ಅಧ್ಯಾಯ – ೪ ಸ್ವಾತಂತ್ರ್ಯ ಹೋರಾಟ ಸಂದರ್ಭದ ನವೋದಯ ಕವನಗಳಲ್ಲಿ ಗಾಂಧೀಜಿ ಚಿತ್ರಣ ಎಂಬ ನಾಲ್ಕನೇ ಅಧ್ಯಾಯದಲ್ಲಿ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ನವೋದಯ ಕವಿಗಳು ರಚಿಸಿರಬಹುದಾದ ಕವನಗಳಲ್ಲಿ ಗಾಂಧೀಜಿಯವರ ಚಿತ್ರಣ ಹೇಗೆ ಒಡಮೂಡಿದೆ ಎಂಬ ವಿಷಯವನ್ನು ಚರ್ಚಿಸಲಾಗಿದೆ.

ಅಧ್ಯಾಯ – ೫ ಸ್ವಾತಂತ್ರ್ಯೋತ್ತರ ಕವನಗಳಲ್ಲಿ ಗಾಂಧೀಜಿ ಚಿತ್ರಣ ಎಂಬ ಅಧ್ಯಾಯ ಐದರಲ್ಲಿ ಸ್ವಾತಂತ್ರ್ಯೋತ್ತರ ಕವನಗಳಲ್ಲಿ ಗಾಂಧೀಜಿಯವರನ್ನು ಕನ್ನಡ ಕವಿಗಳು ಹೇಗೆ ಚಿತ್ರಿಸಿದ್ದಾರೆ ಎಂಬ ಅಂಶಗಳನ್ನು ವಿಶ್ಲೇಷಿಸಲಾಗಿದೆ.

ಅಧ್ಯಾಯ – ೬ ಉಪಸಂಹಾರ ಎಂಬ ಆರನೇ ಅಧ್ಯಾಯದಲ್ಲಿ ಪ್ರಸ್ತುತ ವಿಷಯದ ಅಧ್ಯಯನದ ದೊರಕಿದ ಫಲಿತಗಳನ್ನು, ವಿವೇಚಿಸುವ ಪ್ರಯತ್ನ ಮಾಡಲಾಗಿದೆ ಹಾಗೂ ಅಧ್ಯಯನಕ್ಕೆ ಪೂರಕವಾದ ಆಕರ ಗ್ರಂಥಗಳು ಮತ್ತು ಪರಾಮರ್ಶನ ಗ್ರಂಥಗಳನ್ನು ಅಕಾರಾದಿಯಲ್ಲಿ ನೀಡಲಾಗಿದೆ. ಈ ಮೇಲ್ಕಂಡಂತೆ ತಿಳಿಸಿರುವ ಅಧ್ಯಾಯಗಳ ಮೂಲಕ ಪ್ರಸ್ತುತ ಪ್ರಬಂಧವು ನವೋದಯ ಕವಿಗಳು ಕಂಡ ಗಾಂಧೀಜಿಯ ಚಿತ್ರಣವನ್ನು ಮೊದಲ ಬಾರಿಗೆ ದಾಖಲಿಸುವ ಆಸಕ್ತಿ ಹೊಂದಿದೆ.

ಅಧ್ಯಾಯ – ೨

# ನವೋದಯ ಕಾವ್ಯದಲ್ಲಿ ಪ್ರಸ್ತಾಪಿತವಾದ ವಿವಿಧ ವಿಚಾರಗಳು

**ಪೀಠಿಕೆ :**

ಸಾಹಿತ್ಯ ಒಂದು ಕಲೆ, ಎಲ್ಲ ಕಲೆಗಳಂತೆ ಸಾಹಿತ್ಯವೂ ಪ್ರತಿಭಾವಂತನ ಒಂದು ಸೃಷ್ಟಿ. ಸಾಮಾನ್ಯವಾಗಿ ಎಲ್ಲ ಮನುಷ್ಯರೂ ಒಂದಲ್ಲ ಒಂದು ರೀತಿಯ ಪ್ರತಿಭಾವಂತರೇ. ಆದರೆ ನಾವು ಎಲ್ಲರನ್ನೂ ಪ್ರತಿಭಾವಂತರೆಂದು ಕರೆಯುವುದಿಲ್ಲ. ಅವರಲ್ಲಿ ವಿಶೇಷವಾಗಿ, ಅಸಾಧಾರಣ ಮಟ್ಟದಲ್ಲಿ, ಜೀವನೋಪಯೋಗಿಯಾದ ಕ್ಷೇತ್ರದಲ್ಲಿ ತಮ್ಮ ಶಕ್ತಿ, ಸಾಮರ್ಥ್ಯಗಳನ್ನು ಪ್ರಕಟಿಸಿದವರನ್ನು 'ಕಲೆಗಾರ', 'ನೃತ್ಯಗಾರ', ವ್ಯಂಗ್ಯ ಚಿತ್ರಗಾರ, ನಟ, ವಿಜ್ಞಾನಿ, ಶಿಲ್ಪಿ ಎಂಬಿತ್ಯಾದಿಯ ಪರಿಭಾಷೆಗಳಿಂದ ಗುರುತಿಸುತ್ತೇವೆ. ಅಂತೆಯೆ ಈ ಎಲ್ಲ ಕಲೆಗಳ ಸೃಷ್ಟಿ ಕ್ರಿಯೆಯು ಒಂದೇ ಎಂದು ನಾವು ಭಾವಿಸಿದ್ದಾಗಿಯೂ, ಅವುಗಳ ಹಿಂದೆ ಇರಬಹುದಾದ ಪ್ರೇರಣೆ, ಪ್ರಭಾವ, ಒತ್ತಡ, ಆನಂದ, ಅರಿವು, ಮೂರ್ತ ಮತ್ತು ಅಮೂರ್ತ ಇನ್ನು ಮುಂತಾದ ಅಂಶಗಳ ದೃಷ್ಟಿಯಿಂದ ಅವುಗಳ ಮನೋಧರ್ಮವು ಸಾಂಸ್ಕೃತಿಕ ದೃಷ್ಟಿಯಿಂದ ವಿಭಿನ್ನತೆಯಿಂದ ವಿಭಿನ್ನವಾಗಿದ್ದು, ಅವುಗಳು ಒಂದೊಂದು ಅನನ್ಯವೆಂದು ನಾವು ಅರಿಯುವುದು ಅವಶ್ಯಕ.

ಹಾಗಾಗಿ ಸಾಹಿತ್ಯವು ಒಂದು ಸೃಜನಶೀಲ ಮಾನಸಿಕ ವ್ಯಾಪಾರವಾಗಿದ್ದು, ಅದು ಸಾಹಿತಿಯ ಸಮೃದ್ಧಿ ಬದುಕಿನ ಅನುಭವ, ಆತನ ಪ್ರತಿಭೆ, ಲೋಕಾನುಭವ, ದೃಢವಾದ ಜ್ಞಾಪಕ ಶಕ್ತಿ, ವಿವಿಧ ಕಲೆಗಳ ಪರಿಚಯ, ಪ್ರಾಮಾಣಿಕ ಮನೋಧರ್ಮ, ಪರಂಪರೆ ಮತ್ತು ಚಾರಿತ್ರಿಕ ಅರಿವು ಇನ್ನು ಮುಂತಾದ ಸಂಸ್ಕಾರಗಳ ಹಿನ್ನೆಲೆಯಲ್ಲಿ ಅಪ್ಯಾಯಮಾನ ಭಾಷೆಯಿಂದ ಮೂಡಿದ ಒಂದು ಅನನ್ಯ ಕಲೆ ಆಗಿದ್ದು. ಇದು ಸಾಹಿತಿಯ ಯುಗ ಮನೋಧರ್ಮದ ಭೌಗೋಳಿಕತೆ, ಸಾಮಾಜಿಕತೆ, ರಾಜಕೀಯತೆ, ಧಾರ್ಮಿಕತೆ, ಆರ್ಥಿಕತೆ ಹಾಗೂ ಸಾಂಸ್ಕೃತಿಕತೆಯ ಹಿನ್ನೆಲೆಯಿಂದ ರೂಪಿತವಾದ ಒಂದು ಚಾರಿತ್ರಿಕ ಆಕೃತಿಯು ಕೂಡ ಆಗಿರುತ್ತದೆಂಬುದು ಗಮನಾರ್ಹ.

ಈ ದೃಷ್ಟಿಯಿಂದ ಸಾಹಿತ್ಯವು ನಿಂತ ನೀರಲ್ಲ; ನಿತ್ಯವೂ ಹರಿಯುವ ಜೀವ ನದಿಯಂತೆ, ಅದು ಕಾಲ ಕಾಲಿಕವಾಗಿ ನಡೆಯುವ ಬದಲಾವಣೆಗೆ ಅನಗುಣವಾಗಿ ತನ್ನ ಗತಿಯನ್ನು, ಗಮನವನ್ನು ಬದಲಾವಣೆಗೆ ತನ್ನ ಗತಿಯನ್ನು, ಗಮನವನ್ನು ಬದಲಾಯಿಸುತ್ತಾ ಹರಿಯುತ್ತಿರುತ್ತದೆ. ಹಾಗಾಗಿ ಸಾಹಿತ್ಯ, ಎಂದೂ ಶೂನ್ಯದಿಂದ ಉದ್ಭವಿಸುವುದಿಲ್ಲ. ಅದು ಸಾಹಿತಿಯ ನಿರಂತರವಾದ ಒಳಗಿನ

ಮತ್ತು ಹೊರಗಿನ ಬದುಕಿನ ನಿಕಷಗಳಿಂದ ನಿರಂತರ ಅಭಿವ್ಯಕ್ತಿಯನ್ನು ಪಡೆದುಕೊಳ್ಳುವ ಒಂದು ಸಹಜ ಕ್ರಿಯೆ. ಅಂತೆಯೆ ಇದರಿಂದ ಬದಲಾಗುವ ಸಂಕ್ರಮಣಗಳಿಗೆ ಆತನ ಮನಸ್ಸು ತೆರೆದುಕೊಳ್ಳುವುದರಿಂದ ಸಾಹಿತ್ಯ ಚರಿತ್ರೆಯ ಘಟ್ಟಗಳೂ ರೂಪುಗೊಳ್ಳುವುದು ಸಹಜವಾಗಿದ್ದು, ಇದು ಅಂದಿನ ಸಾಹಿತ್ಯ ರಚನೆಯ ಏಳು – ಬೀಳಿನ, ದೃಷ್ಟಿ – ಧೋರಣೆಯನ್ನು ಮಾತ್ರ ಹೇಳುವುದಿಲ್ಲ. ಬದಲಾಗಿ ಆಯಾಯ ಯುಗಮನೋಧರ್ಮದ ಸಮಗ್ರ ಸಮಾಜದ ಸಾಂಸ್ಕೃತಿಕ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತದೆ. ಹೀಗಾಗಿ ಯಾವುದೇ ಸಾಹಿತ್ಯದ ಚರಿತ್ರೆ ನಿರಂತರವಾದ ಕ್ರಾಂತಿ ಚಳುವಳಿಗಳ, ಪ್ರಯೋಗಗಳ ಕತೆಯೇ ಆಗಿರುತ್ತದೆ. ಕನ್ನಡ ಈ ಮಾತಿಗೆ ಅಪವಾದವಲ್ಲ. ಎಲ್ಲ ಸಂಪ್ರದಾಯ ಮತ್ತು ನವ್ಯತೆಗಳ ಹೋರಾಟವಾಗಿದ್ದು, ಈ ನವ್ಯತೆಯ ವಿಜಯವು ಕನ್ನಡ ಸಾಹಿತ್ಯಾಹಾಸದ ಉದ್ದಕ್ಕೂ ಕಾಲಕಾಲಕ್ಕೆ ಕಂಡುಬರುವ ಪ್ರವೃತ್ತಿಯಾಗಿದ್ದು, ತನ್ನ ಪರಂಪರೆಯ ನೆಲಗಟ್ಟಿನ ಮೇಲೆ ನಿಂತೇ ಹೊಸತನವನ್ನು ಸ್ವಾಗತಿಸುತ್ತ, ಅರಗಿಸಿಕೊಳ್ಳುತ್ತ ಸಮನ್ವಯದ ಹಾದಿಯಲ್ಲಿ ಸಾಗಿಬಂದಿದೆ. ಈ ದೃಷ್ಟಿಯಿಂದ ಪರಂಪರೆಯ ಹಳಗನ್ನಡ ನಡುಗನ್ನಡ ಸಾಹಿತ್ಯಗಳಂತೆಯೆ 'ಹೊಸಗನ್ನಡ ಸಾಹಿತ್ಯ'ವೂ ಇಂಥ ಒಂದು ಸಮನ್ವಯದ ಫಲವೇ ಆಗಿದ್ದು. ಇದೊಂದು ಸುದೀರ್ಘವೂ ಶ್ರೀಮಂತವೂ ಆದ ಪರಂಪರೆಯು ಆಗಿದ್ದು, ಇದು ಇನ್ನೊಂದು ಕಡೆ ಪ್ರಬಲವು ಪ್ರಖರವೂ ಮತ್ತು ಸಂಕೀರ್ಣವೂ ಆದ ಇಂಗ್ಲೀಷ್ ಸಾಹಿತ್ಯದ ಪ್ರಭಾವದ ದಾಂಪತ್ಯ ಸಂಯೋಗಗಳಿಂದ ಉದಯವಾದ ಸಾಹಿತ್ಯವನ್ನೇ 'ಆಧುನಿಕ ಕನ್ನಡ ಸಾಹಿತ್ಯ'ವೆಂದು ಕರೆಯಲಾಗುತ್ತದೆ.

'ಆಧುನಿಕ ಕನ್ನಡ ಸಾಹಿತ್ಯ'ವೆಂದರೆ ಮುಖ್ಯವಾಗಿ ಇಪ್ಪತ್ತನೆಯ ಶತಮಾನದ ಸಾಹಿತ್ಯವೆಂದು ಗುರುತಿಸುತ್ತೇವೆ. ಆದರೆ ಇದು, ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಈ ಹೊಸ ಸಾಹಿತ್ಯದ ಬೀಜಗಳು ಮೊಳೆತು, ಬೆಳೆ ಹುಲುಸಾಗಿ ಕೈಗೆ ಬಂದದ್ದು, ಇಪ್ಪತ್ತನೆಯ ಶತಮಾನದಲ್ಲಿ. ಅಂದರೆ ಇದು, ಅಂದಿನ ವಸಾಹತುಶಾಹಿ ಸಂಸ್ಕೃತಿಯ ಪರಿಣಾಮದ ಫಲದಿಂದ ಪ್ರವೇಶವಾದ ಅಂದಿನ ಆಂಗ್ಲ ವಿದ್ಯಾಭ್ಯಾಸ, ಮುದ್ರಣ, ಆಡಳಿತ ವ್ಯವಹಾರ, ಹೊಸ ಶಿಕ್ಷಣ ಪದ್ಧತಿ, ಹೊಸ ವಿಚಾರ ಸರಣಿ, ವಿಜ್ಞಾನ, ತಂತ್ರಜ್ಞಾನ, ಇಂಗ್ಲೀಷ್ ಸಾಹಿತ್ಯ, ಕೈಗಾರಿಕೀಕರಣ, ಅಂದಿನ ಆಂಗ್ಲ ಕ್ರೈಸ್ತ ಮಿಶನರಿಗಳು ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ ಮತ್ತು ಚಾರಿತ್ರಿಕವಾಗಿ ಉಂಟು ಮಾಡಿದ ಎಚ್ಚರ ಇನ್ನು ಮೊದಲಾದ ಅಂಶಗಳು ಪರಂಪರೆಯೊಂದಿಗೆ ಮುಖಾಮುಖಿ ಆಗುವ ಮೂಲಕ ಅಂದಿನ ಭಾರತೀಯ ಸಾಂಸ್ಕೃತಿಕ ಬದುಕಿನಲ್ಲಿ ಇದೊಂದು ಇತಿಹಾಸವನ್ನೇ ಸೃಷ್ಟಿ ಮಾಡಿತು ಅಂದರೆ, ವ್ಯಕ್ತಿಯ ಸಮಷ್ಟಿ ಬದುಕಿನಲ್ಲಿ ಹೊಸ ದೃಷ್ಟಿ ಧೋರಣೆ, ಸ್ವಾತಂತ್ರ್ಯಪ್ರಜ್ಞೆ, ರಾಷ್ಟ್ರೀಯ ಮನೋಧರ್ಮ, ವೈಜ್ಞಾನಿಕ ಮನೋಭಾವನೆ, ಪ್ರಾದೇಶಿಕ ಮತ್ತು ಭಾರತೀಯ ಭಾವೈಕ್ಯತೆ, ಪ್ರಜಾಪ್ರಭುತ್ವದ ಆಸ್ಥೆ, ವಿಶ್ವಸ್ಥಪ್ರಜ್ಞೆ, ರಾಜಕೀಯ ಅರಿವು, ಸರ್ವೋದಯ, ಸಮಾನತೆ ಮತ್ತು

ಸಹೋದರತ್ವ, ಮಾನವೀಯ ಪ್ರೇಮ, ಜಾತ್ಯಾತೀತ ಮನೋಧರ್ಮ, ದೇಶಾಭಿಮಾನ ಇನ್ನು ಮೊದಲಾದ ಹೊಸ ಆಶೋತ್ತರಗಳನ್ನು ಸೃಷ್ಟಿಸುವ ಮೂಲಕ ಅದರಿಂದ ಫಲಿತವಾದ ಆಧುನಿಕ ಕನ್ನಡ ಸಾಹಿತ್ಯ ವಿಶಿಷ್ಟವಾಗಿ ಬೆಳೆಸುವಲ್ಲಿ ಅದರ ಪಾತ್ರ ತುಂಬ ಮಹತ್ತ್ವದ್ದು.

ಇದು ಅದುವರೆಗಿನ ಸಾಹಿತ್ಯ ಪರಂಪರೆಯ ಪ್ರಮುಖ ಆಸಕ್ತಿಯ ವಸ್ತುವಾದ ದೇವರು, ಧರ್ಮವನ್ನು ಬದಲಾಯಿಸಿ ಈ ಸಾಹಿತ್ಯದ ಆಸಕ್ತಿಯ ಕೇಂದ್ರ ಮನುಷ್ಯನೇ ಹೊರತು, ದೇವರಲ್ಲ. ಅಂದರೆ ಇದು ದೇವರನ್ನು ಮರೆಯಲೇಬೇಕಂದು ಹೇಳಲಿಲ್ಲ. ಮನುಷ್ಯನನ್ನು ಮೀರಿದ ಇನ್ನೊಂದು ಶಕ್ತಿ ಇರುವಿಕೆಯನ್ನು ಗುರುತಿಸಿತು. ಆದರೆ ದೇವರ ಅಸ್ತಿತ್ವದ ಪ್ರಶ್ನೆಯಲ್ಲಿ ಆಸಕ್ತಿಯಿಲ್ಲ. ದೇವರಲ್ಲಿ ನಂಬಿಕೆಯನ್ನಿಟ್ಟುಕೊಂಡು ಜೀವನವನ್ನು ನಡೆಸುವವರನ್ನು ಗೌರವಿಸುವುದು. ಅಂದರೆ ಇದು ಮುಖ್ಯವಾಗಿ ಮನುಷ್ಯ ಸರ್ವಶಕ್ತನಲ್ಲ ಎಂದು ಗುರುತಿಸಿಯೂ ಅವನು ದೀನ ಎಂದು ಭಾವಿಸಿದಾಗಲೂ ಅವನಲ್ಲಿ ಆಸಕ್ತಿಯನ್ನು ಕಳೆದುಕೊಳ್ಳುವುದಿಲ್ಲ. ಜೀವನಶ್ರದ್ಧೆ ಇರುವ ಲೌಕಿಕತನ ಇದರ ಪ್ರಮುಖ ಆಸಕ್ತಿ. ಇದು ಆಧ್ಯಾತ್ಮಕ್ಕೊಲಿದಾಗಲೂ ಆಧ್ಯಾತ್ಮವನ್ನೇ ಜೀವನ ಎಂದು ಭಾವಿಸಲಿಲ್ಲ. ಮಾನವೀಯತೆ ಮುಖ್ಯವೆಂದು ಸಾರುವ ಮೂಲಕ, ಇಹಲೋಕದ ಬಾಳು ಪರಲೋಕಕ್ಕೆ ದಾರಿ ಮಾತ್ರವಲ್ಲ. ಈ ಬಾಳಿನಲ್ಲೇ ಇದಕ್ಕೆ ಆಸಕ್ತಿ. ಮನುಷ್ಯ ದೇವರ ಸಂಬಂಧವಲ್ಲದೆ ಮನುಷ್ಯ ಇತರ ಸಂಬಂಧಗಳು ತುಂಬ ಮೌಲಿಕವಾಗಿದ್ದು, ಆತನ ಭಾವನೆಗಳು, ಆಸೆಗಳು, ಕನಸುಗಳು ಎಲ್ಲ ಇದರ ವಸ್ತುವಾಗುತ್ತವೆ. ಈ ಲೋಕದಲ್ಲಿ ಇದಕ್ಕೆ ಕುತೂಹಲ, ಆಸಕ್ತಿ : ಸೃಷ್ಟಿ ಮನುಷ್ಯ, ಪ್ರಕೃತಿ – ಮನುಷ್ಯ, ಕುಟುಂಬ – ಮನುಷ್ಯ, ಸ್ನೇಹ, ಪ್ರೇಮ, ದ್ವೇಷ, ನೋವು – ನಲಿವು, ಸಾಮಾಜಿಕ ನ್ಯಾಯ ಇನ್ನು ಮುಂತಾದ ನೂರಾರು ಆಸಕ್ತಿ, ಧೋರಣೆ – ನಿಲುವು ಈ ಸಾಹಿತ್ಯದ ವಸ್ತುವಾಗಿದ್ದು ತುಂಬ ಗಮನಾರ್ಹತೆ ಪಡೆದುಕೊಂಡವು.

ಒಟ್ಟಿನಲ್ಲಿ ಆಧುನಿಕ ಕನ್ನಡ ಸಾಹಿತ್ಯವು ಸುಮಾರು ಒಂದು ಶತಮಾನಕ್ಕೂ ಮಿಕ್ಕ ಇತಿಹಾಸವನ್ನು ಹೊಂದಿದ್ದು, ಇದು ಆಧುನಿಕ ಬದುಕಿನ ಸ್ಥಿತ್ಯಂತರ ಮತ್ತು ವಿಸ್ತೃತ ಬೆಳವಣಿಗೆ ಜೊತೆಗೇ ಅದರ ಸಾಹಿತ್ಯಕ ವೈಶಿಷ್ಟ್ಯತೆ, ಹೊಚ್ಚ ಹೊಸತನವೂ ಅಡಗಿರುವುದನ್ನು ನಾವು ಮರೆಯುವಂತಿಲ್ಲ. ಅವುಗಳಲ್ಲಿ ನವೋದಯ, ಪ್ರಗತಿಶೀಲ, ನವ್ಯ, ದಲಿತ–ಬಂಡಾಯ ಇನ್ನು ಮುಂತಾದ ತುಂಬ ಮಹತ್ವದ ಸಾಹಿತ್ಯದ ಪ್ರಮುಖ ಧಾರೆಗಳಾಗಿ, ಅವುಗಳ ಪ್ರಮುಖ ಧೋರಣೆ, ನಿಲುವು, ಅದಮ್ಯ ಒಲವು, ಬದ್ಧತೆ, ಆಶಯ, ಮೌಲಿಕತೆ, ವೈಶಿಷ್ಟ್ಯತೆ ಇನ್ನು ಮುಂತಾದ ಮಹತ್ವದ ಅಂಶಗಳು ಆಧುನಿಕ ಕನ್ನಡ ಸಾಹಿತ್ಯದ ಒಟ್ಟರಿವು ಆಗಿದೆ. ಇದರಲ್ಲಿ ನವೋದಯ ಸಾಹಿತ್ಯ ಘಟ್ಟ ಅತ್ಯಂತ ಮಹತ್ವವೆನಿಸಿದ್ದು ಸುಳ್ಳಲ್ಲ.

**ನವೋದಯ ಸಾಹಿತ್ಯ ನೆಲೆ ಬೆಲೆ :**

ಇದು ಆಧುನಿಕ ಕನ್ನಡ ಸಾಹಿತ್ಯದ ನಾಲ್ಕು ಪ್ರಮುಖ ಘಟ್ಟಗಳಲ್ಲೊಂದು. ಸ್ವಾತಂತ್ರ್ಯಪೂರ್ವ ಆಧುನಿಕ ಕನ್ನಡ ಸಾಹಿತ್ಯ ಭಾಗಕ್ಕೆ ನವೋದಯ ಸಾಹಿತ್ಯವೆಂದು ಹೆಸರು ಕೊಟ್ಟವರು ಕುವೆಂಪು ಎಂದು ಜಿ.ಎಸ್. ಶಿವರುದ್ರಪ್ಪ ಅವರು ಗುರುತಿಸುವರು. ಅಂತೆಯೆ 'ನವೋದಯ' ಎಂಬ ಪದವನ್ನು ಪ್ರಮುಖವಾಗಿ ಮೂರು ಅರ್ಥಗಳಲ್ಲಿ ನಾವು ಗಮನಿಸುವುದು. 'ಒಂದು, ಅದೊಂದು ಯೋಜನಾ ಬದ್ಧವಾದ ಸಾಂಸ್ಕೃತಿಕ ಚಳುವಳಿ ಎಂದು ಇದನ್ನು ಉತ್ತರ ಕರ್ನಾಟಕದಲ್ಲಿ 'ಗೆಳೆಯರ ಗುಂಪಿ'ನ ಕವಿಗಳು ಮತ್ತು ದಕ್ಷಿಣ ಕರ್ನಾಟಕದ ಬಿ.ಎಂ.ಶ್ರೀ ಹಾಗೂ ಅವರ ಶಿಷ್ಯರು ಈ ಚಳುವಳಿಯನ್ನು ಯಶಸ್ವಿಯಾಗಿ ನಡೆಸಿಕೊಂಡು ಬಂದರು. ಎರಡನೆಯದು, ಇದೊಂದು ಚಾರಿತ್ರಿಕ ಕಾಲಖಂಡ ಎಂದರೆ ಈ ಶತಮಾನದ ಪೂರ್ವಾರ್ಧವನ್ನು ಗುರುತಿಸುವ ಸಂಜ್ಞೆ ಮೂರನೆಯದು, ಇದನ್ನು ಒಂದು ಗುಣ (Quality) ವಾಚಕ ಶಬ್ದವನ್ನಾಗಿ ಕೂಡ ಬಳಸಲಾಗುವುದು. ಹಾಗಾಗಿ "ನವೋದಯ" ಶಬ್ದದ ಅರ್ಥವೇ 'ಹೊಸ ಹುಟ್ಟು, ಈ ಹುಟ್ಟನ್ನು ಹಲವಾರು ಕವಿಗಳು ಹೊಸ ಬಗೆಯಿಂದ ಗುರುತಿಸುವ ಮೂಲಕ ಅದನ್ನು ಎಲ್ಲಿಲ್ಲದ ವಿಶಿಷ್ಟ ಉತ್ಸಾಹದಿಂದ ಸ್ವಾಗತಿಸುವುದನ್ನು ಕೆಳಗಿನ ಕೆಲವು ಪದ್ಯಗಳ ಸಾಲುಗಳ ಉದಾಹರಣೆಯ ಸಾಕ್ಷಿಯಿಂದ ನಾವು ಗಮನಿಸಬಹುದು.

ಹೊಸ ಬಗೆಯ ತೋರ್ದಪುದು : ನೆಲೆಸಿದಽಕಾರಿರುಳ
ಮುಸುಕು ಹರಿದಳಿದುದೌ! ನೋಡಲೆಲ್ಲೆಯೂ
ಎಸೆದಪುವು ನವನವೋತ್ಸಾಹಂಗಳಗ್ಗಳಿಸಿ ನೇತ್ರ ಪ್ರಮೋದಂಗಳು
ಹೊಸದಳಿರು, ಹೊಸ ಮುಗುಳು, ಹೊಸ ಮಲರು, ಹೊಸಗಂಪು!
ಹೊಸ ಸುಗ್ಗಿ ಹೊಸ ಬಾಳು! ನಲಿಯತಾ ತಾಯ್ನೆಲವೆ!
ನುಸುಳಿದತ್ತಂಡಲೆದ ಕುತ್ತವದು! ಸಮರದೊಳು ವಿಜಯಸಿರಿನಿನ್ನದಿನ್ನು

('ಹೊಸಬಾಳು' – ಸಾಲಿ ರಾಮಚಂದ್ರರಾಯರು)

ಆಸರಿನಲಿ ಆಸೆಯಲ್ಲಿ
ಹೀರಿ ಹೀರಿ ನನ್ನನಾಡಿ
ನರಗಳೆಲ್ಲ ಉಬ್ಬಿಕೊಂಡು
ಮತ್ತನಾಗಿ ಸುತ್ತವೆಲ್ಲ
ಹೊಸ ಬೆಳಕಿನ ಹೊಸ ಬಾಳಿನ
ಭೂಷಣಳ ಸೂಚನೆಗಳನು
ಕೊನರುತಿಹುದು ಕಂಡೆನು

('ವರುಣ' – ಪೇಜಾವರ ಸದಾಶಿವರಾಯರು)

ನಾಡಿನ ಪುಣ್ಯದ ಪೂರ್ವ ದಿಗಂತದಿ
ನವ ಅರುಣೋದಯ ಹೊಮ್ಮುತಿದೆ!
ಚಿರನೂತನ ಚೇತನುದಾತ್ಸಾಹದಿ
ನವೀನ ಜೀವನ ಚಿಮ್ಮುತಿದೆ! ('ನವೀನ' – ಕುವೆಂಪು)

ಸಂಜೆ ಸೇರಿತು ಬಂದು ಕನ್ನಡದ ನಾಡಿನೊಳು
ಮಂಜು ಮುಸಿಕದ ಮುಗಿಲು ಕತ್ತಲೆಯಗೂಡಿಸಿತೊ,
ಸಂಜೇರಿ ನಿದ್ದೆಗೈದಿತೇ? ಸತ್ತಿತೋ ಜೀವ?
ಮಿಡುಕಿಲ್ಲದಾಯಿತಾಗ
ಮುಂಜಾವಿನವಳ ತಂಬೆಲರೊಡನೆ ಮುದ್ದಣ್ಣನ
ಹುಂಜವಕ್ಕೆಕ್ಕಿ ಕೂಗಿದ ಮೇಲೆ ಆ ದನಿಯ
ಸಂಜೀನವೆಬ್ಬಿಸಿತ್ತು ಸಾಸಿಗರ ಹಿಂಜರಿಯ
ದಂಥ ಚೈತನ್ಯವನ್ನು (ಮುದ್ದಣ್ಣ, ಅಂಬಿಕಾತನಯದತ್ತ)

ಇನ್ನು ಮೊದಲಾದ ಆಧುನಿಕ ಕನ್ನಡದ ಆರಂಭಘಟ್ಟದ ಪ್ರಮುಖ ಪ್ರಾತಿನಿಧಿಕ ಕವಿಗಳು ತಂತಮ್ಮ ಬಿಡಿ ಕವನಗಳಲ್ಲಿ 'ನವೋದಯ' ಸಾಹಿತ್ಯ ಪರಿಕಲ್ಪನೆಗಳನ್ನು ಕುರಿತು ಹೇಳಿರುವ ಮಾತುಗಳು ತುಂಬ ಉಲ್ಲೇಖಾರ್ಹ. ಈ ದೃಷ್ಟಿಯಿಂದ ಈ 'ಹೊಸತು' ಎನ್ನುವುದು ಕಾಲಕಾಲಕ್ಕೆ ಬದಲಾಗುವ ಕಲ್ಪನೆಯಾದುದ್ದರಿಂದ ಇದು ನಮ್ಮ ಆಶ್ಚರ್ಯಕ್ಕೆ ಕಾರಣವನ್ನು ಹೇಳಬೇಕಾಗಿಲ್ಲ. ಡಿ.ವಿ.ಜಿ. ಅವರು ಒಂದು ಕಡೆ ಮುದ್ದಣ್ಣನು ತನ್ನ 'ರಾಮಾಶ್ವಮೇಧ'ದಲ್ಲಿ ಹೊಸದೊಂದು ದಾರಿಯನ್ನು ಹಿಡಿದುದನ್ನು ಗಮನಿಸಿ 'ನವ್ಯತೆ' ಎಂದು ಗುರುತಿಸಿದರೆ, ಗೋಪಾಲಕೃಷ್ಣ ಅಡಿಗರು ನವ್ಯ ಕವಿತೆಯ ಪ್ರಾರಂಭದ ಪ್ರಯೋಗದ ಕಾಲವನ್ನು 'ಇನ್ನೊಂದು ನವೋದಯ ಕಾಲ'ವೆಂದು ಉಲ್ಲೇಖಿಸಿದ್ದಾರೆ. ಆದರೆ ಪ್ರೊ. ರಹಮತ್ ತರೀಕೆರೆ ಅವರು "ತನ್ನ ಗತಕಾಲದ ಪರಂಪರೆಯ ಮತ್ತು ಸಂಪ್ರದಾಯಗಳ ಮೇಲೆ ರೇಗಿ ಅವುಗಳನ್ನು ಪರಿಷ್ಕರಿಸಲು ಸಿದ್ಧವಾದ ಒಂದು ಬಗೆಯ ಸೃಜನಾತ್ಮಕ ಚಳುವಳಿ" ಎಂದು ಗುರುತಿಸಿದ್ದಾರೆ. ಈ ದೃಷ್ಟಿಯಿಂದ ನವೋದಯ ಸಾಹಿತ್ಯವು ಹಿಂದಿನ ಪರಂಪರೆಯನ್ನು ಅರಗಿಸಿಕೊಂಡು, ತನ್ನ ಕಾಲದ ಹೊಸ ಬದುಕಿನ ಆಶೋತ್ತರಗಳಿಗೆ ನುಡಿಕೊಡುವ ಒಂದು ಬಗೆಯ ಮನೋಧರ್ಮವಾಗಿದ್ದು, ಒಂದು ಕಾಲ – ದೇಶ ಬದ್ಧವಾದ ವರ್ತಮಾನದಲ್ಲಿ ತನ್ನ ಹಿಂದು–ಇಂದು–ಮುಂದುಗಳನ್ನು ಮುಪ್ಪುರಿಸಿಗೊಳಿಸಿ ಸಾರ್ವತ್ರಿಕತೆಯನ್ನು ಸಾಧಿಸಿ ತೋರಿಸುವ ಒಂದು ಬಗೆಯ ನವೀನ ಅಭಿವ್ಯಕ್ತಿ ವಿಧಾನವಾಗಿದೆ.

ಈ ಬಗೆಗೆ ಚದುರಂಗ ಅವರು ಒಂದು ಕಡೆ "ಸಾಮಾಜಿಕ ಜೀವನದಲ್ಲಿ ಅತೃಪ್ತಿ ಕಾಣಿಸಿಕೊಂಡಾಗ, ಸಹಜವಾಗಿ ಪ್ರತಿಭಟನೆ ಕಾಣಿಸಿಕೊಳ್ಳುತ್ತದೆ. ಅಂತೆಯೇ ಸಮಾಜದಿಂದ ಸೃಷ್ಟಿಗೊಂಡ ಸಾಹಿತ್ಯದಲ್ಲಿಯೂ ಸಹ, ಅತೃಪ್ತಿ ಕಾಣಿಸಿಕೊಂಡಾಗ ಪ್ರತಿಭಟನೆ

ಕಾಣಿಸಿಕೊಳ್ಳುವುದು ಅನಿವಾರ್ಯ ಹಾಗೂ ಇಪ್ಪತ್ತನೆಯ ಶತಮಾನದ ಆದಿಯಲ್ಲಿ ಹಳೆಯ ಕಾವ್ಯದ ಸಂಪ್ರದಾಯ ಬದ್ಧತೆಯನ್ನು ಮುರಿದು, ನವೋದಯ ಸಾಹಿತ್ಯ ಮೂಡಿ ಬಂದಿತು" ಎಂದು ಗುರುತಿಸಿದ್ದಾರೆ. ಇದು ನಿಜಕ್ಕೂ ವಾಸ್ತವವಾಗಿದ್ದು, ನವೋದಯ ಸಾಹಿತ್ಯ ಸೃಷ್ಟಿಯ ಹಿಂದೆ ಇದ್ದ ಹೊಸ ಸಮಸ್ಯೆ – ಸವಾಲು, ಅದಕ್ಕೆ ಪೂರಕವಾದ ಅಭಿವ್ಯಕ್ತಿ ವಿಧಾನಗಳನ್ನು ಕಂಡುಕೊಳ್ಳಬೇಕಾದ ಅವಶ್ಯಕ ಮಾರ್ಗವೆಂದು ಗುರುತಿಸಬಹುದು.

ಒಟ್ಟಿನಲ್ಲಿ 'ನವೋದಯ ಸಾಹಿತ್ಯ'ವು ಹಳೆಯ ಸಂಪ್ರದಾಯ ಮತ್ತು ಪರಂಪರೆಯ ಜಾಡಿನಿಂದ ಹೊರಳುವ ಸಂಕ್ರಮಣ ಬದುಕಿನ ಒಂದು ಹೊಸ ಮನೋಧರ್ಮದ ಸಿದ್ಧತೆಯಾಗಿದ್ದು, ೧೯ನೆಯ ಶತಮಾನದ ಆಂಗ್ಲ ವಸಾಹಾತುಶಾಹಿಯ ದಾಸ್ಯಕ್ಕೆ ಒಳಗಾದ ಸಂವೇದನೆಯಿಂದ ರೂಪಿತವಾದ ಒಂದು ಹೊಸ ಬಗೆಯ ಸಾಹಿತ್ಯ ಪ್ರವೃತ್ತಿಯಾಗಿದೆ. ಅಂದರೆ ಇದು, ೧೯, ೨೦ನೇ ಶತಮಾನದ ಕೊನೆಯ ಮತ್ತು ಮೊದಲ ಭಾಗದಲ್ಲಿ ಕಾಣಿಸಿಕೊಂಡ ಬದುಕಿನ ಹೊಸ ಬಗೆಯ ಸಮಸ್ಯೆ – ಸವಾಲು, ಬದುಕಿನ ಸಂಕೀರ್ಣತೆ, ರಾಷ್ಟ್ರೀಯ ಪ್ರಜ್ಞೆ, ಸಾಂಸ್ಕೃತಿಕ ಪುನರುಜ್ಜೀವನದ ಪ್ರಕ್ರಿಯೆಯಾಗಿದ್ದು, ಅದುವರೆಗಿನ ಜಡಗೊಂಡ ಪರಂಪರೆಯಿಂದ ಬಿಡಿಸಿಕೊಂಡು ಹಾಗೂ ಹೊಸ ಬಗೆಯ ಕಾವ್ಯ ಪರಿಕಲ್ಪನೆ, ಭಾಷೆಯ ನುಡಿಗಟ್ಟು ಮತ್ತು ಸಾಹಿತ್ಯ ಪ್ರಕಾರಗಳನ್ನು ಕಂಡುಕೊಳ್ಳುವುದು ಅಗತ್ಯವಾಗಿತ್ತು. ಈ ಶೋಧನೆಯಿಂದ ರೂಪಿತವಾದ ಸಾಹಿತ್ಯವೇ 'ಆಧುನಿಕ ಕನ್ನಡ ಸಾಹಿತ್ಯ'ವಾಗಿದ್ದು, ಅದರ ಮೊದಲ ಆವಿಷ್ಕಾರ ಘಟ್ಟವನ್ನು 'ನವೋದಯ ಸಾಹಿತ್ಯ'ವೆಂದು ಗುರುತಿಸುತ್ತೇವೆ.ಇಂತಹ ಸಾಹಿತ್ಯ ಘಟ್ಟದಲ್ಲಿ ಹಲವಾರು ವಿಚಾರಗಳು ಪ್ರಸ್ತಾಪಿತವಾಗಿವೆ ಅವುಗಳನ್ನು ಈ ಕೆಳಗಿನಂತೆ ಕಾಣಬಹುದು.

**೧. ನವೋದಯ ಸಾಹಿತ್ಯದಲ್ಲಿ ರೊಮ್ಯಾಂಟಿಕ್ ಮನೋಧರ್ಮದ ವಿಚಾರಗಳು :**

ಪ್ರಾಚೀನ ಕನ್ನಡ ಸಾಹಿತ್ಯ ಬಹುಮಟ್ಟಿಗೆ ಸಂಸ್ಕೃತ ಸ್ವಲ್ಪಮಟ್ಟಿಗೆ ಪ್ರಾಕೃತಕ್ಕೆ ಋಣಿಯಾಗಿರುವಂತೆ, ಆಧುನಿಕ ಕನ್ನಡ ಸಾಹಿತ್ಯ ಬಹುಮಟ್ಟಿಗೆ ಇಂಗ್ಲೀಷ್, ಸ್ವಲ್ಪಮಟ್ಟಿಗೆ ಗ್ರೀಕ್, ಬಂಗಾಳಿ, ಮರಾಠಿ, ಹಿಂದು ಇನ್ನು ಮೊದಲಾದ ಭಾಷೆಗಳಿಗೆ ಋಣಿಯಾಗಿದೆ. ಈ ಹಿನ್ನೆಲೆಯಲ್ಲಿ ಮೂಡಿದ ಕನ್ನಡ ನವೋದಯ ಸಾಹಿತ್ಯವು ಇಂಗ್ಲಿಷ್ ರೊಮ್ಯಾಂಟಿಕ್ ಸಾಹಿತ್ಯದ ಪ್ರೇರಣೆಯಿಂದ ಉದಯವಾಯಿತು. ಅಂತೆಯೆ ನವೋದಯ ಸಾಹಿತ್ಯದ ಕಾವ್ಯ, ಕಥೆ, ಕಾದಂಬರಿ, ಪ್ರಬಂಧ ಇನ್ನು ಮೊದಲಾದ ಸಾಹಿತ್ಯ ಪ್ರಕಾರಗಳು ಕನ್ನಡಕ್ಕೆ ಬಂದವು. ಈ ಬಗೆಯ ಸಾಹಿತ್ಯವನ್ನು ಸ್ವಾತಂತ್ರ್ಯೋತ್ತರ ನವ್ಯ ಸಾಹಿತ್ಯದ ಲೇಖಕರು ಮತ್ತು ಅದನ್ನು ಮೆಚ್ಚಿಕೊಂಡು ಪ್ರತಿಪಾದಿಸುತ್ತಿದ್ದ ಸಾಹಿತ್ಯ ವಿಮರ್ಶಕರು ತಮ್ಮ ಹಿಂದಿನ ನವೋದಯ ಸಾಹಿತ್ಯವನ್ನು ಹೀಗಳಿಕೆಯ ಸಣ್ಣ ದನಿಯಿಂದ "ರಸನಿಷ್ಠ ಸಾಹಿತ್ಯ" ಇತ್ಯಾದಿಯಾದ

ಅರ್ಥಗಳಿಂದ ಅದನ್ನು "ರಮ್ಯಕಾವ್ಯ" ಎಂದು ಕರೆಯುವ ಪ್ರಯತ್ನ ಮಾಡಿದರು. ಆದರೆ ಆ ಸಾಹಿತ್ಯ ಪರಿಸರದಲ್ಲಿ ಕೃಷಿ ಮಾಡುತ್ತಿದ್ದ ಯಾರೂ ಆವರೆಗೆ ಅದಕ್ಕೆ ಯಾವ ಹೆಸರನ್ನೂ ಕೊಟ್ಟುಕೊಂಡಿರಲಿಲ್ಲ. "೧೯೫೦ರ ತನಕ ಚಾಚಿದ ಕಾವ್ಯ ನಿರ್ಮಿತಿಯನ್ನು 'ಹೊಸಗನ್ನಡ ಕಾವ್ಯ' ಎಂದೋ, 'ಆಧುನಿಕ ಕನ್ನಡ ಕಾವ್ಯ' ಎಂದು ಕರೆದದ್ದು ನಮಗೆ ನೆನಪಿಲ್ಲ. ಈ ಎರಡನ್ನು ಒಲ್ಲದೆ ಕುವೆಂಪು ಅವರು 'ನವೋದಯ ಕಾವ್ಯ' ಎಂದು ಹೆಸರು ಕೊಟ್ಟರೆಂದು" ಜಿ.ಎಸ್. ಶಿವರುದ್ರಪ್ಪ ಉಲ್ಲೇಖಿಸಿರುವ ಮಾತು ತುಂಬ ಸಮರ್ಥನೀಯವಾಗಿದ್ದು "ಈ ಹೊಸಗನ್ನಡ ಕಾವ್ಯ ರೊಮ್ಯಾಂಟಿಕ್ ಕಾವ್ಯದಿಂದ ಪಡೆದ ಪ್ರೇರಣೆ ಬಹುಮಟ್ಟಿಗೆ ಅದರ ರೂಪಾಂತರಕ್ಕೆ ಅನ್ವಯಿಸುವ ಮಾತೆ ಹೊರತು ಅದರ ಅಂತಸ್ಸತ್ವಕ್ಕೆ ಅಲ್ಲ' ಮತ್ತು ಅದು ಭಾರತೀಯ ಪರಂಪರೆಗೆ ಹೊಸತಾದುದೇನೂ ಅಲ್ಲವೆಂಬುದು ಸ್ಪಷ್ಟವಾಗುತ್ತದೆ. ಆದ ಕಾರಣ ಪಾಶ್ಚಾತ್ಯ ರೊಮ್ಯಾಂಟಿಕ್ ಕಾವ್ಯದಿಂದ ಪಡೆದ ಪ್ರೇರಣೆ ಬಹುಮಟ್ಟಿಗೆ ಅದರ ರೂಪಾಂಶಕ್ಕೆ ಅನ್ವಯಿಸುವ ಮಾತೆ ಹೊರತು ಅದರ ಅಂತಸ್ಸತ್ವಕ್ಕೆ ಅಲ್ಲ' ಮತ್ತು ಅದು ಭಾರತೀಯ ಪರಂಪರೆಗೆ ಹೊಸತಾದುದೇನೂ ಅಲ್ಲವೆಂಬುದು ಸ್ಪಷ್ಟವಾಗುತ್ತದೆ. ಆದ ಕಾರಣ ಪಾಶ್ಚಾತ್ಯ ರೊಮ್ಯಾಂಟಿಕ್ ಕಾವ್ಯದಿಂದ ಪ್ರೇರಣೆ ಪಡೆದ ಮಾತ್ರಕ್ಕೆ, ಅದರ ಅನುಕರಣೆಯಾಗಲಿ ಅನುಸರಣೆಯಾಗಲಿ ಮಾತ್ರವಾಗಿದೆ ಎಂದು ಹೇಳಲಾಗದ ಹೊಸಗನ್ನಡದ ಆಧುನಿಕ ಕಾವ್ಯವನ್ನು 'ನವೋದಯ ಕಾವ್ಯ'ವೆಂದು ಕುವೆಂಪು ಅವರು ಹೆಸರಿಸಿರುವುದು ತುಂಬಾ ಉಚಿತವಾಗಿದೆ" ಎಂದು ಗುರುತಿಸಿದ್ದಾರೆ. ಅಂತೆಯೆ ಇದನ್ನು ಸಮರ್ಥಿಸುವಂತೆ ಎಸ್.ಎಂ. ವೃಷಭೇಂದ್ರ ಸ್ವಾಮಿ ಅವರು "ನವೋದಯ ಮತ್ತು ನವ್ಯ ಎಂಬ ಹೆಸರುಗಳು ಅಸಮರ್ಪಕ ಬಳಕೆ. ಅವುಗಳು ರೂಢಿಯಲ್ಲಿ ಬಂದಿರುವುದರಿಂದ ಅವಕ್ಕೆ ಬಲ ಬಂದಿದೆ; ಚಾಲನೆ ದೊರೆತಿದೆ" ಎಂದು ಉಲ್ಲೇಖಿಸಿರುವ ಮಾತುಗಳು ತುಂಬ ಅರ್ಥಪೂರ್ಣವಾಗಿದ್ದು, "ಈ ರೊಮ್ಯಾಂಟಿಸಂ" ಎಂಬುದು ಎಲ್ಲ ಕಾಲದ ಸಾಹಿತ್ಯದಲ್ಲಿಯೂ ತಕ್ಕಮಟ್ಟಿಗೆ ಇರಬಹುದಾದ "ಒಂದು ಗುಣ ವಿಶೇಷ"ವೆಂದು ಗುರುತಿಸಲಾಗುತ್ತದೆ.

ಆದರೆ ಈ ಪರಿಕಲ್ಪನೆಯ ನಿಷ್ಪತ್ತಿ ಬಳಕೆಗೆ ಬಂದದ್ದು ಒಂದು ಸ್ವಾರಸ್ಯದ ಸಂಗತಿ. ಅದು "ಎಂಟನೆಯ ಶತಮಾನದಲ್ಲಿ ರೋಮನ್ ಚಕ್ರಾಧಿಪತ್ಯಕ್ಕೆ ಹೊರಗಿನಿಂದ ನುಗ್ಗಿದ ಬರ್ಬರ ಜನಾಂಗದ ಸಂಘರ್ಷದ ಸಂಕರದಿಂದಾಗಿ ಅಂದಿನ ಅಧಿಕೃತ ಭಾಷೆಯಾದ ಲ್ಯಾಟಿನ್ ಜೊತೆ ಜೊತೆಗೆ ಒಂದು ಬಗೆಯ 'ದೇಶ್ಯ' ಭಾಷೆ ಆಗಿ ರೂಪುಗೊಂಡಿತು. ಇದಕ್ಕೆ 'ರೊಮ್ಯಾನಿಕ್' ಎಂದು ಹೆಸರು. ಈ ಪದದ ಕ್ರಿಯಾ ವಿಶೇಷಣವಾದ 'ರೊಮ್ಯಾನಿಸ್' ಎಂಬುದರಿಂದ 'ರೋಮಾನ್ಸ್' ಎಂಬ ನಾಮಪದ ಬಂದಿತು. ಆದುದರಿಂದ ಈ ಮೊದಲು ಇದು, ಒಂದು ಭಾಷಾ ವರ್ಗದ ಹೆಸರಾಗಿದ್ದು, ಕ್ರಮೇಣ ಆ ಭಾಷೆಯಿಂದ ರಚಿತವಾದ ಬರವಣಿಗೆಗೂ ಆ ಹೆಸರು ಅಂಟಿಕೊಂಡು 'ರೊಮ್ಯಾಂಟಿಕ್ ಕಾವ್ಯ' ಎಂಬ ಹೆಸರು ಬಂದಿತು. 'ಈ 'ರೋಮಾನ್ಸ್'

ಎಂದರೆ 'ಕಟ್ಟುಕತೆ', 'ಕಲ್ಪಿತ ಕತೆಗಳ ಕಂತೆ', 'ಯಕ್ಷ – ಕಿನ್ನರರ ಕತೆ', 'ವಿಲಕ್ಷಣ ಕತೆ' ಹಾಗೂ ಕೊನೆಗೊಮ್ಮೆ ಸುಳ್ಳುಗಾರ ಎಂಬ ಅರ್ಥವನ್ನು ಕೂಡಾ ಪಡೆಯಿತು. ಆದರೆ '೧೮ನೇ ಶತಮಾನದ ಹೊತ್ತಿಗೆ 'ರೊಮ್ಯಾಂಟಿಕ್ ಪದ ಒಂದು ಬಗೆಯ ನಿಸರ್ಗ ಪರಿಸರವನ್ನು ಸೂಚಿಸುವ ಪದವಾಗಿ ಬಳಕೆಯಾಗತೊಡಗಿತು'. ಇನ್ನೂ ಕ್ರಮೇಣ ಈ ಪದಕ್ಕೆ 'ಲೋಕವನ್ನು ನೋಡುವ ಒಂದು ವಿಶಿಷ್ಟ ದೃಷ್ಟಿ ಅಥವಾ ಅನುಭವಗಳನ್ನು ರೂಪಿಸುವ ಒಂದು ವಿಧಾನವೆಂದು ಪರಿಗಣಿತವಾಯಿತು. ಅನಂತರ "೧೮ ಮತ್ತು ೧೯ನೇ ಶತಮಾದನಲ್ಲಿ ಒಂದು ಸಾಹಿತ್ಯ ಚಳುವಳಿಯ ಹೆಸರಾಗಿ ಗಮನಾರ್ಹತೆ ಪಡೆದುಕೊಂಡಿತು. ಅಲ್ಲಿಂದ ಈ ಪದವನ್ನು ಎರಡು ಬಗೆಯಲ್ಲಿ ಉಪಯೋಗಿಸಿದರು. ಒಂದು, 'ಒಂದು ವಿಶಿಷ್ಟ ಮನೋಧರ್ಮ' ಎಂಬ ಹೆಸರಿನಿಂದ ಬಳಕೆಗೊಂಡದ್ದು, ಮತ್ತೊಂದು, 'ಒಂದು ಸಾಹಿತ್ಯ ಚಳುವಳಿ' ಎಂಬ ಹೆಸರಿನಿಂದ ಹೆಚ್ಚು ಗಮನಾರ್ಹತೆ ಪಡೆದುಕೊಂಡಿತು.

ಆದರೆ ಈ ಬಗೆಯ ಮನೋಧರ್ಮದ ಕಾವ್ಯಗಳನ್ನು ೧೯ನೆಯ ಶತಮಾನದ ಕನ್ನಡ ಕವಿಗಳು ಭಾಷಾಂತರ, ಅನುವಾದ ಮತ್ತು ರೂಪಾಂತರಗಳ ಮೂಲಕ ಮೊದ ಮೊದಲು ಕನ್ನಡಕ್ಕೆ ತಂದರು. ಬಳಿಕ ಕ್ರಮೇಣ ಪರಂಪರೆಯ ಸಂವೇದನೆಯಿಂದ ರಚಿತವಾದ ಸ್ವತಂತ್ರ ಕನ್ನಡ ಕಾವ್ಯಗಳಿಗೂ ಅದೇ ಹೆಸರು ಅಂಟಿಕೊಂಡು 'ರೊಮ್ಯಾಂಟಿಕ್ ಕಾವ್ಯ'ವೆಂದು ಕರೆಯುವ ಪರಿಪಾಠ ಬಂತು. ಆದರೆ "ಈ ಮನೋಧರ್ಮವು ನಮ್ಮ ಪರಂಪರೆಯಲ್ಲೇ ಇತ್ತು. ಆದರೆ ಸಾಹಿತ್ಯದ ತಾಂತ್ರಿಕ ಪರಿಕರಗಳಲ್ಲಿ ಮಾತ್ರ ನಮ್ಮ ಕವಿಗಳು ಪಾಶ್ಚಾತ್ಯರಿಗೆ ಋಣಿ' ಆಗಿದ್ದರೆಂದು ನಾವು ಗುರುತಿಸಬಹುದು.

ಹಾಗೆಯೇ ಈ ಕುರಿತು ಆಂಗ್ಲ ಪ್ರಸಿದ್ಧ ಕವಿ ವರ್ಡ್ಸ್‌ವರ್ತನು ತನ್ನ 'ಲಿರಿಕಲ್ ಬ್ಯಾಲೆಡ್ಸ್'ನ ಮುನ್ನುಡಿಯಲ್ಲಿ ಜನಸಾಮಾನ್ಯರ ಜೀವನದಿಂದ ಸರಳ ಸಾಧಾರಣ ಸಂಗತಿಗಳಿಂದ ಕೂಡಿದ ವಸ್ತುಗಳನ್ನು ಎತ್ತಿಕೊಳ್ಳುವುದು ಮತ್ತು ಅವುಗಳನ್ನು ಜನತೆಯದೇ ಆದ ಭಾಷೆಯನ್ನು ಕಾವ್ಯ ಭಾಷೆಯನ್ನಾಗಿ ಮಾಡಿಕೊಂಡು ವರ್ಣಿಸುವುದು. ಉದಾಹರಣೆಗೆ, ಭಗ್ನಾವಶೇಷಗಳ ಧಾರುಣತೆ, ಗುಂಭ ಮೌನ, ಅತಿಮಾನುಷ್ಯ ಸಂಗತಿಗಳು, ಚಳಿಗಾಲದಲ್ಲಿ ಎಲೆಯುದುರಿದ ಕಾನನಗಳ ನೀರವ ಏಕಾಂತತೆ, ಪ್ರೇತ, ಪ್ರಣಯ ಸಂಗತಿಗಳು, ಪ್ರಣಯಿಗಳ ರಹಸ್ಯಾಗಮನ, ರಾಗಾನುರಾಗಗಳ ವೈಭವ, ದುಃಖ, ಕಾಮಿಗಳ ಕ್ರೌರ್ಯ, ಭ್ರಮನಿರಸನ, ಉನ್ಮಾದ, ಬೆಟ್ಟದ ಅಂಚಿನಲ್ಲಿ ನಡೆಯುವ ಕಾದಾಟಗಳು, ಅಸಾಧ್ಯವಾದದ್ದರ ಅಭಿಲಾಷೆಗಳು ಹೀಗೆ ಇನ್ನು ಮೊದಲಾದ ಸಂಗತಿಗಳನ್ನು ಕುರಿತು ಬರೆದುದ್ದನ್ನು ರೊಮ್ಯಾಂಟಿಸಿಂ ಎಂಬ ಹೆಸರಿನಿಂದ ಉಲ್ಲೇಖವಾಗಿ ಈ ಮನೋಧರ್ಮದ ಪ್ರಭಾವದ ಹಿನ್ನೆಲೆಯಲ್ಲಿ ಬರೆದ ಕನ್ನಡ ಮೊದಲ ಕವಿಗಳು ಬಿ.ಎಂ. ಶ್ರೀಕಂಠಯ್ಯ, ರಾ. ನರಸಿಂಹಾಚಾರ್ಯ,

ಹಟ್ಟಿಯಂಗಡಿ ನಾರಾಯಣರಾಯ, ಪಂಜೆಮಂಗೇಶರಾಯ, ಗೋವಿಂದ ಪೈ, ಇನ್ನು ಮೊದಲಾದ ಶ್ರೇಷ್ಠ ಕವಿಗಳನ್ನು ನಾವಿಲ್ಲಿ ಹೆಸರಿಸಬಹುದು. ಅವರಲ್ಲಿ ಈ ನವೋದಯ ಕಾವ್ಯವನ್ನು ಅಧಿಕೃತವಾಗಿ ಶ್ರೀಯವರು 'ಇಂಗ್ಲಿಷ್ ಗೀತಗಳ' (೧೯೨೬) ಮೂಲಕ ಪ್ರಾರಂಭಿಸಿದರು. ಆದರೆ ಈ ಗ್ರಂಥ ಪ್ರಕಟವಾಗುವ ಮೊದಲೇ ಹೊಸ ಮಾರ್ಗದ ಕವಿಗಳು ಹಾಡುವುದಕ್ಕೆ ತೊಡಗಿದ್ದರೆನ್ನುವುದನ್ನು ಶ್ರೀಯವರೇ ತಮ್ಮ ಅರಿಕೆಯಲ್ಲಿ ಹೇಳಿಕೊಂಡಿರುವುದರಿಂದ 'ಇಂಗಿಷ್ ಗೀತಗಳು' ಪ್ರಕಟವಾಗುವ ಮೊದಲು ಹಟ್ಟಿಹಂಗಡಿ ನಾರಾಯಣರಾಯರು ಇಂಗ್ಲಿಷ್ ಕವಿಗಳ ತಮ್ಮ ಅನುವಾದವನ್ನು 'ಆಂಗ್ಲ ಕವಿತಾವಳಿ' ೧೯೧೯ ಎಂಬ ಹೆಸರಿನಲ್ಲಿ ಪ್ರಕಟಿಸಿದ್ದರು. ಅವರು ಅನುವಾದಿಸಿದ ಪದ್ಯಗಳು ಪಠ್ಯಪುಸ್ತಕಗಳಲ್ಲಿಯೂ ಕಾಣಿಸಿಕೊಂಡು ತುಂಬ ಪ್ರಚಾರ ಪಡೆದಿದ್ದವು. ಅಂತೆಯೆ ನಾರಾಯಣರಾಯರಿಗೆ ಕನ್ನಡ ಕವಿಗಳ ಬಗ್ಗೆ ಸ್ಪಷ್ಟ ವಿಚಾರಗಳಿದ್ದವು. ಅಂದರೆ "ಇಂಗ್ಲಿಷ್ ಮಾರ್ಗಗಳ ಅನುಸರಣೆಯಿಂದ ಇನ್ನು ಮುಂದೆ ಕನ್ನಡ ಕಾವ್ಯಗಳ ರಚನೆ, ಅಲಂಕಾರಗಳ ಇವುಗಳು ಹೇಗೆ ಬದಲಾಗಬಹುದೆಂಬುದು, ಜೊತೆಗೆ, ರಾಷ್ಟ್ರೀಕ, ಸಾಮಾಜಿಕ, ಚಾರಿತ್ರಿಕ ಮುಂತಾದ ಲೌಕಿಕ ಪ್ರಮೇಯಗಳಿಗೆ ಹೆಚ್ಚು ಗಮನ ಕೊಡುವರೆಂದೂ, ದೀರ್ಘ ಪುರಾಣಗಳ ಬದಲಾಗಿ ಲಘು ಕೃತಿಗಳನ್ನು ರಚಿಸುವರೆಂದೂ ಛಂದಸ್ಸಿನಲ್ಲಿ ಹೊಸ ಮಾದರಿಗಳನ್ನು ಕಲ್ಪಿಸಬಹುದೆಂದೂ, ಅಲಂಕಾರಗಳಲ್ಲಿ ಅಚೇತನ ಪದಾರ್ಥಗಳಿಗೆ ವಾಕ್ ಶಕ್ತಿಯನ್ನೂ ಮಾನಸಿಕ ಭಾವಗಳಿಗೆ ಮೂರ್ತತ್ವವನ್ನು ಆರೋಪಿಸುವ ಉತ್ಪ್ರೇಕ್ಷೆಯು ರೂಢಿಯಾಗಬಹುದೆಂದೂ, ಹಳಗನ್ನಡಕ್ಕಿಂತ ನಡುಗನ್ನಡವನ್ನು ಹೆಚ್ಚಾಗಿ ಪ್ರಯೋಗಿಸುವರೆಂಬ" ಸೂಚನೆಗಳನ್ನು ನೀಡಿದ್ದರು. ಆದರೆ ಈ ಬಗೆಯ ಭಾವಕೋಶವನ್ನು ಹೊಂದಿದ ಕಾವ್ಯವು ಮುಂದಿನ ಭವಿಷ್ಯತ್ತಿನಲ್ಲಿ ಸೃಷ್ಟಿಯಾಗಲಿಲ್ಲ. ಅದರ ಬದಲು ತಕ್ಕ ಮಟ್ಟಿಗೆ, ಭಾರತೀಯ ಮಣ್ಣಿನ ವಾಸನೆಯ ಸಂವೇದನೆಯ ಹಿನ್ನೆಲೆಯಲ್ಲಿ ಆಗಿನ ವರ್ತಮಾನ, ಮುಂದಿನ ಭವಿಷ್ಯತ್ತಿನಲ್ಲಿ ಸೃಷ್ಟಿಯಾಗಲಿಲ್ಲ. ಅದರ ಬದಲು ತಕ್ಕ ಮಟ್ಟಿಗೆ, ಭಾರತೀಯ ಮಣ್ಣಿನ ವಾಸನೆಯ ಸಂವೇದನೆಯ ಹಿನ್ನೆಲೆಯಲ್ಲಿ ಆಗಿನ ವರ್ತಮಾನ, ತುರ್ತು ಅಗತ್ಯತೆ, ಹೊಸ ಆಶೋತ್ತರಗಳನ್ನು ಪ್ರತಿಬಿಂಬಿಸುವ ರೊಮ್ಯಾಂಟಿಕ್ ಮನೋಧರ್ಮದ ಕವನಗಳನ್ನು ಬಿ.ಎಂ.ಶ್ರೀ, ಗೋವಿಂದ ಪೈ, ಪಂಜೆ ಮೊದಲಾದವರು ಪ್ರಕಟಿಸಿದರು. ಈ ನಿಟ್ಟಿನಲ್ಲಿ ಬಿ.ಎಂ.ಶ್ರೀ ಅವರು ಪಾಶ್ಚಾತ್ಯ ಮಾದರಿಯ ಸಾನೆಟ್‌ಗಳಿಗೆ ಸಂವಾದಿಯಾಗಿ ದೇಶೀಯ ಸರಳ ರಗಳೆಯ ಬಂಧವನ್ನು ಬಳಸಿದರು. ವಸ್ತುವಿನ ರೂಪಾಂತರ, ಭಾಷಾಂತರಗಳಲ್ಲಿ 'ಬಾನಾಡಿ', 'ಮುದ್ದಿನ ಕುರಿಮರಿ', 'ದುಃಖ ಸೇತು', 'ಮುಪ್ಪು – ಯೌವ್ವನ ', 'ಬಾನ್‌ಕೊಂಡ ಕೃಷ್ಣನ್', 'ಅರಮನೆಯ ಒಸಗೆ', 'ಮೈಸೂರು ಮಕ್ಕಳು', 'ಕಾಣಿಕೆ', 'ಶುಕ್ರಗೀತೆ', 'ಧರ್ಮಯುದ್ಧ', 'ಕನ್ನಡ ಬಾವುಟ' ಇನ್ನು ಮೊದಲಾದ ಅರವತ್ತೂರು ಕವನಗಳು ಪರಕೀಯ ಭಾವನೆಗಳು ಮೂಡಿಸಿದರೂ,

ಅವು ನಮ್ಮಗಳ ನಡುವೆ ಇರುವ ಪಾತ್ರ, ಘಟನೆ, ಸಂಗತಿಗಳಾಗಿಯೂ ಗುರುತಿಸಿಕೊಳ್ಳುವ ಮೂಲಕ, ಕನ್ನಡ ಕಂಪಿನ ಸ್ವೋಪಜ್ಞತೆಯನ್ನು ಪಡೆದುಕೊಂಡಿವೆ.

ಒಟ್ಟಿನಲ್ಲಿ ಭಾರತವು, ಆಂಗ್ಲರ ಸಾಮ್ರಾಜ್ಯಶಾಹಿ ಮತ್ತು ವಸಾಹತುಶಾಹಿಯ ಸಂಸ್ಕೃತಿಯ ದಾಸ್ಯಕ್ಕೊಳಗಾದ ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ ಹಾಗೂ ಸಾಂಸ್ಕೃತಿಕವಾಗಿ ಎಷ್ಟು ನಷ್ಟವನ್ನು ಅನುಭವಿಸಿದರೋ ಅಷ್ಟೇ ಲಾಭವನ್ನು ಅವರಿಂದ ಪಡೆದುಕೊಂಡ ಪ್ರೇರಣೆ, ಪ್ರಭಾವಗಳಿಂದ ಪಡೆದರೆಂಬುದು ಗಮನಾರ್ಹ. ಹಾಗೆಯೆ ಅದರ ಪ್ರಾದೇಶಿಕ ತುಂಡು ನೆಲವಾದ ಕನ್ನಡ ಸಾಂಸ್ಕೃತಿಕ ಮತ್ತು ಸಾಹಿತ್ಯ ಲೋಕವು ಕೂಡಾ ಅದೇ ಲಾಭ – ನಷ್ಟ ಹೊಂದುವ ಮೂಲಕ ಒಂದು ಹೊಸ ಹೊಸ ಸಾಹಿತ್ಯ ಮತ್ತು ಪರಂಪರೆ ಸಂಪ್ರದಾಯವನ್ನು ಕಂಡುಕೊಂಡಿತು. ಈ ಹಿನ್ನೆಲೆಯಲ್ಲಿ ರೊಮ್ಯಾಂಟಿಕ್ ಸಾಹಿತ್ಯಕ್ಕೆ ಸಂವಾದಿಯಾಗಿ ಮೂಡಿದ ಸಾಹಿತ್ಯದಲ್ಲಿ ಕನ್ನಡ ನವೋದಯ ಸಾಹಿತ್ಯವೂ ಕೂಡಾ ಒಂದು. ಇದರ ಮೊದಲ ಸಂವೇದನೆಯ ಹರಿಕಾರರಾದ ರಾ. ನರಸಿಂಹಾಚಾರ್ಯ, ಹಟ್ಟಿಹಂಗಡಿ ನಾರಾಯಣರಾಯರು, ಬಿ.ಎಂ.ಶ್ರೀ, ಪಂಜೆ, ಗೋವಿಂದ ಪೈ, ಕುವೆಂಪು, ದ.ರಾ. ಬೇಂದ್ರೆ ಇನ್ನು ಮುಂತಾದ ಶ್ರೇಷ್ಠರು ಅದರಿಂದ ಒಂದು ಹೊಸ ಮಾರ್ಗವನ್ನು ರೂಪಿಸಿಕೊಂಡರು. ಅಂತೆಯೆ ಇದು, ಪ್ರಾಚೀನ ಕನ್ನಡ ಸಾಹಿತ್ಯ ಪರಂಪರೆಗಿಂತ ಭಿನ್ನವಾಗಿ ನಿಂತಿಕೊಳ್ಳುವ ಒಂದು ಪ್ರಮುಖ ಧಾರೆಯಾಯಿತು. ಇದರಿಂದ ಆವರೆಗೆ ಸಾಹಿತ್ಯ ಲೋಕವನ್ನು ಪ್ರವೇಶಿದ ಕ್ಷುದ್ರವೆಂದು ಭಾವಿಸಲ್ಪಟ್ಟ ಜಗತ್ತಿನ ಸಾಮಾನ್ಯ ವಸ್ತು, ಘಟನೆ, ಪಾತ್ರ, ಸಂಗತಿಗಳೆಲ್ಲವೂ ಸ್ಥಾನವನ್ನು ಪಡೆದುಕೊಂಡವು. ಈ ಹಿನ್ನೆಲೆಯಲ್ಲಿ ಸಾಮಾನ್ಯ ವಸ್ತುವಿನಲ್ಲೂ ವಿಸ್ಮಯತೆ, ರೋಮಾಂಚನ, ಆಕರ್ಷಣೆ ಮೂಡಿ ಬಂದವು. ಈ ದೃಷ್ಟಿಯಿಂದ 'ನವೋದಯ ಸಾಹಿತ್ಯ'ಕ್ಕೆ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಒಂದು ಮಹತ್ವದ ಸ್ಥಾನವನ್ನು ಪಡೆದುಕೊಂಡಿತು.

ಸಂಕ್ರಮಣ ಬದುಕಿನ ಸಂವೇದನೆಯಿಂದ ಪ್ರತಿಯೊಂದು ಸಾಹಿತ್ಯ ಪರಂಪರೆಯೂ ಪ್ರೇರಣೆ – ಪ್ರಭಾವಗಳನ್ನು ಪಡೆದುಕೊಂಡು ಬದಲಾಗುವಂತೆ ನವೋದಯ ಸಾಹಿತ್ಯವೂ ಅದರಿಂದ ಹೊರತಲ್ಲ. ಅಂದರೆ ಅದು, ಪಾಶ್ಚಾತ್ಯ ಸಂವೇದನೆ, ಮತ್ತೊಂದು ದೇಶೀಯ ಸಂವೇದನೆಯಾಗಿದೆ. ಅವುಗಳನ್ನು ಒಂದೊಂದನ್ನೂ ನಾವಿಲ್ಲಿ ಗುರುತಿಸಬಹುದಾಗಿದೆ.

**೨. ಪಾಶ್ಚತ್ಯ ಪ್ರೇರಣೆ – ಪ್ರಭಾವಗಳು ಹಿನ್ನಲೆಯ ವಿಚಾರಗಳು :**

ಇದು ಸಾಹಿತ್ಯದ ಒಂದು ಬಹುಮುಖ್ಯವಾದ ಪ್ರೇರಣೆಯಾಗಿದ್ದು, ಒಂದು ರಾಷ್ಟ್ರ ಮತ್ತೊಂದು ರಾಷ್ಟ್ರವನ್ನು ಆಕ್ರಮಣಕ್ಕೊಳಗಾದಾಗ ಅದರೆಲ್ಲದರ ದಟ್ಟ ಪ್ರಭಾವ ಶುರುವಾಗುವುದು

ಆಡಳಿತದ ಮೂಲಕ. ಅಂತೆಯೆ ಭಾರತವು ಕೂಡ ೧೯೫೦ರಂದು ಇಂಗ್ಲೆಂಡಿನ ಒಂದು ಪ್ರಮುಖ ವಸಾಹತುವಾಗಿ ಕೈವಶವಾದಾಗ ಅದರ ಒಂದು ದಟ್ಟ ಸಂವೇದನೆಗೆ ಒಳಗಾಯಿತು. ಆದರೆ ಈ ಸಂವೇದನೆಯಿಂದ ಅದುವರೆಗಿನ "ಛಪ್ಪನ್ನೈವತ್ತಾರು" ರಾಜಪ್ರಭುತ್ವದ ನೆರಳಿನಡಿ 'ಅಸೇತು ಹಿಮಾಚಲ', 'ಗಂಗೇಚ ಯಮುನೇಚ ಗೋದಾವರೀಚ' ಪಠಣಗಳಿಂದ ಸಾಂಸ್ಕೃತಿಕ ಏಕತೆಯನ್ನು ಸ್ಥಾಪಿಸಿಕೊಂಡಿದ್ದ ಭಾರತವು ಏಕಚಕ್ರಾಧಿಪತ್ಯ ಆಡಳಿತಕ್ಕೊಳಪಟ್ಟು ಐತಿಹಾಸಿಕ ದೃಷ್ಟಿಯಿಂದಲೂ ತುಂಬ ಗಮನಾರ್ಹತೆ ಪಡೆದುಕೊಂಡಿತು.

ಅಂದರೆ ಈ ಊಳಿಗದ ಏಕತೆಯ ಮೂಲಕ ಭಾರತವನ್ನು ಪ್ರವೇಶಿಸಿದ ಆಂಗ್ಲ ಶಿಕ್ಷಣ, ಭಾಷೆ, ವೈಚಾರಿಕತೆ, ವೈಜ್ಞಾನಿಕತೆ, ಆಧುನಿಕತೆ, ಕೈಗಾರಿಕೀಕರಣ ನೀತಿ, ವ್ಯಾಪಾರೀಕರಣ ಮನೋಧರ್ಮ ಮತ್ತು ಸಾಂಸ್ಕೃತಿಕ ಶೋಧನೆ, ಪುನರ್‌ಮೌಲ್ಯೀಕರಣ ಇನ್ನು ಮೊದಲಾದ ಮನೋಧರ್ಮವು ಭಾರತೀಯ ಸಂಸ್ಕೃತಿ ಮತ್ತು ಸಾಹಿತ್ಯವನ್ನು ಮುಖಾಮುಖಿಯಾಗುವ ಮೂಲಕ ತೀವ್ರ ತಲ್ಲಣವನ್ನುಂಟು ಮಾಡಿತು. ಅಂತೆಯೆ ಅದರಿಂದ ಅದುವರೆಗಿನ ಜಡವಾಗಿದ್ದ ಭಾರತೀಯ ಬದುಕಿನಲ್ಲಿ ಒಂದು ಹೊಸ ರಕ್ತ ಸಂಚಾರ ಉಂಟಾಯಿತು.

ಅಂತೆಯೆ ಈ ಸಂವೇದನೆಯು, ಆ ಹೊತ್ತಿನ ಕನ್ನಡ ಪ್ರೌಢ ಕಾವ್ಯ ರಚನೆ ಚಿಕ್ಕದೇವರಾಜ ಒಡೆಯರ (೧೭೦೦) ಆಳ್ವಿಕೆಯ ಕೊನೆಯ ಹೊತ್ತಿಗೆ ನಿಂತುಹೋಗಿದ್ದು, ಅಲ್ಲಿಂದ ಮುಂದೆ ದೌರ್ಬಲ್ಯ, ಅಸಾರತೆ, ಅನ್ಯಾಕ್ರಮಣ ಮೊದಲಾದವು ರಾಜಕೀಯ ಪ್ರಪಂಚದಲ್ಲಿ ಕಾಣಿಸಿಕೊಂಡಿತು. ಬಳಿಕ ಅದು ಸಾಹಿತ್ಯ ಪ್ರಪಂಚದಲ್ಲಿಯೂ ಕಾಣಿಸಿಕೊಂಡು ಪರಂಪರೆಯ ಮುಂದುವರಿಕೆಯಿಂದ ಬಿಡುಗಡೆಗೊಳಿಸಿತು. ಅಂದರೆ ಅಂದಿನ ಸಂದಿಗ್ಧ ಪರಿಸ್ಥಿತಿಯ ಬರಹಗಾರರು ಪುನಃ ಪರಂಪರೆಯ ಜಾಡಿನಲ್ಲೇ ಚರ್ವಿತ – ಚವಣ ವಸ್ತುವನ್ನಿಟ್ಟುಕೊಂಡು ಹಳೆಯ ಕಾವ್ಯ ಪರಿಕಲ್ಪನೆ, ಭಾಷೆ, ನುಡಿಗಟ್ಟುಗಳಿಂದ ಹೊಸ ಬದುಕಿನ ಸಂಕೀರ್ಣ ಸಮಸ್ಯೆ – ಸವಾಲುಗಳಿಗೆ ನುಡಿಕೊಡಲು ಸಾಧ್ಯವಿಲ್ಲವೆಂದು ತೋರಿಸಿತು. ಹಾಗಾಗಿ ಈ ನಿಟ್ಟಿನಲ್ಲಿ ನೆರವಾದ ೧೮ನೆಯ ಶತಮಾನದ ಪಶ್ಚಿಮದ 'ರೊಮ್ಯಾಂಟಿಕ್ ಸಾಹಿತ್ಯ'ವು ೧೯ನೆಯ ಶತಮಾನದ ಕನ್ನಡ ಸಾಹಿತ್ಯಕ್ಕೆ ತನ್ನದೇ ದಟ್ಟ ಪ್ರಭಾವ – ಪ್ರೇರಣೆಯನ್ನು ಒದಗಿಸುವ ಮೂಲಕ ಒಂದು ಹೊಸ ಮನೋಧರ್ಮವನ್ನು ಸೃಷ್ಟಿ ಮೂಡಿತು. ಈ ಹಿನ್ನೆಲೆಯಲ್ಲಿ ವರ್ಡ್ಸ್‌ವರ್ತ್, ಶೆಲ್ಲಿ, ಕೀಟ್ಸ್, ಬರ್ನ್ಸ್, ಟೆನಿಸನ್, ಆರ್ನಲ್ಡ್, ಷೇಕ್ಸ್‌ಪಿಯರ್ ಇನ್ನು ಮೊದಲಾದ ಶ್ರೇಷ್ಠ ಕವಿಗಳ ಕಾವ್ಯವು ಪ್ರೇರಣೆ – ಪ್ರಭಾವ ಸಿಗುವ ಮೂಲಕ, ಕನ್ನಡ ಸಾಹಿತ್ಯವನ್ನು ಪೊರೆಯುವ ತೊಟ್ಟಿಲಾದರು. ಅಂತೆಯೆ ಇದು ಆಧುನಿಕ ಕನ್ನಡ ಸಾಹಿತ್ಯ ಉದಯಕ್ಕೆ ನಾಂದಿ ಆಯಿತು. ಹಾಗೆಯೆ ಜಿ.ಎಸ್. ಶಿವರುದ್ರಪ್ಪ ಅವರ ಪ್ರಕಾರ "ಹೊಸಗನ್ನಡದಲ್ಲಿ ನವೋದಯ ಬಂದದ್ದು ಇಂಗ್ಲಿಷ್ ರೊಮ್ಯಾಂಟಿಕ್ ಕವಿಗಳ ಕಾವ್ಯ ರೂಪಗಳ

ಪ್ರೇರಣೆಯಿಂದ" ಆಗಿದ್ದರೂ, ಅದು "ಈ ಹೊಸಗನ್ನಡ ಕಾವ್ಯ ಹಂತ ಹಂತದಲ್ಲೂ ಪಾಶ್ಚಾತ್ಯ ಕಾವ್ಯ ಪ್ರೇರಣೆಯಿಂದಲೇ ಹೊಸ ಹೊಸ ರೂಪಗಳನ್ನು ಆವಿಷ್ಕಾರ ಮಾಡಿಕೊಂಡಂತೆ ತೋರುವುದಾದರೂ ಈ ಎಲ್ಲ ಪ್ರಯೋಗಗಳ ಹಿಂದೆ, ಇಡೀ ಕನ್ನಡ ಸಾಹಿತ್ಯದ ಪರಂಪರೆಯ ಒಂದು ರೀತಿಯಲ್ಲಿ ಪುನರಾವರ್ತನೆಯಾಗಿದೆ. ಈ ಎಲ್ಲಾ ಪ್ರಯೋಗಗಳ ಮೂಲ ಉದ್ದೇಶ ಪರಂಪರೆಯ ಸೆಳೆತದಿಂದ ತಪ್ಪಿಸಿಕೊಂಡು, ಹೊಸತೊಂದನ್ನು ನಿರ್ಮಾಣ ಮಾಡುವ ಪ್ರಯತ್ನವೇ ಆಗಿದ್ದರೂ, ಜ್ಞಾತವಾಗಿಯೋ, ಅಜ್ಞಾತವಾಗಿಯೋ ಕನ್ನಡ ಕವಿಗಳು ತಮ್ಮ ಹಿಂದಿರುವ ಕಾವ್ಯ ಪರಂಪರೆಯಿಂದ ಅನೇಕ ಸೂಚನೆಗಳನ್ನೂ, ನಿರ್ದೇಶನಗಳನ್ನು ಪಡೆದಿದ್ದಾರೆ. ಇದನ್ನು ನಾವು ಕೇವಲ ಪರಾನುಕರಣೆಯಿಂದಾಗಲೀ, ಪರಾನುಸರಣಿಯಿಂದಾಗಲೀ ಕಾವ್ಯಕ್ಕೆ ಹೊಸತನವನ್ನು ಕಂಡುಕೊಳ್ಳಲಿಲ್ಲ. ಈ ಪ್ರಯೋಗ ನವೀನ ಹಾಗೂ ಪ್ರಾಚೀನ ಪ್ರಜ್ಞೆಯ ಸಂಘರ್ಷ ಸಮನ್ವಯಗಳಿಂದ ಸ್ಫೂರ್ತಿಗೊಂಡಿದ್ದು ಎನ್ನುವುದನ್ನು ದೃಢಪಡಿಸುತ್ತದೆ" ಎಂದು ಗುರುತಿಸಿದ್ದು, ಎರಡು ಸಂವೇದನಗಳ ಕಸಿಯಿಂದ ಆಧುನಿಕ ಕನ್ನಡ ಸಾಹಿತ್ಯ ಮೂಡಿತ್ತೆಂಬುದನ್ನು ಗಮನಾರ್ಹ.

ಆದರೆ, ಅದುವರೆಗೂ ಉಚ್ಛ್ರಾಯದಲ್ಲೇ ಹರಿದು ಬಂದ ಕನ್ನಡ ಸಾಹಿತ್ಯ ಕೃಷಿ ಅನಂತರ ಕ್ಷೀಣವಾಗಲು ಹಲವಾರು ಕಾರಣಗಳಿದ್ದವು. ಅವುಗಳಲ್ಲಿ ಬಹುಮುಖ್ಯ ಕಾರಣವೆಂದರೆ ಭಾರತದ ಆಡಳಿತ ಸೂತ್ರಗಳನ್ನೆಲ್ಲಾ ತನ್ನ ಕೈಗೆ ತೆಗೆದುಕೊಂಡಿದ್ದು ಇಂಗ್ಲಿಷ್ ಸಾಮ್ರಾಜ್ಯಶಾಹಿಯ ದಮನಕಾರಿ ನೀತಿ. ಇಂಥ ಪರಿಸ್ಥಿತಿಯಲ್ಲಿ ರಾಜಾಶ್ರಯವನ್ನೇ ನೆಚ್ಚುಕೊಂಡು ಈ ಸಾಹಿತ್ಯ ರಚನೆ ಮಾಡುತ್ತಿದ್ದ ನಮ್ಮ ಕವಿಗಳ ಬಾಯಿ ಕಟ್ಟೇ ಹೋಗಿದ್ದು. ಅದಕ್ಕಿಂತ ಹೆಚ್ಚಾಗಿ ಎಲ್ಲ ಪ್ರಜ್ಞಾವಂತರಿಗೂ ರಾಷ್ಟ್ರದ ಬಿಡುಗಡೆಯೇ ಮುಖ್ಯ ಆಸ್ಥೆ ಆಗಿದ್ದು ಸಾಹಿತ್ಯ ಕೃಷಿಯಂತ ಚಟುವಟಿಕೆಗಳಲ್ಲಿ ಅವರು ಆಸಕ್ತಿ ಕಳೆದುಕೊಂಡಿದ್ದರು. ಅದರ ಜೊತೆಗೆ ಇಲ್ಲಿನ ಸಣ್ಣಪುಟ್ಟ ಸಂಸ್ಥಾನಗಳಲ್ಲಿ ಆಗಿಂದಾಗ್ಗೆ ನಡೆಯುತ್ತಿದ್ದ ಕದನಗಳು, ಇವುಗಳಲ್ಲಿ ಹೊರಗಿನವರ ಪ್ರವೇಶ ಮತ್ತು ಯುದ್ಧದಲ್ಲಿ ಒಂದು ಪ್ರದೇಶವನ್ನು ಮತ್ತೊಬ್ಬರು ಆಕ್ರಮಿಸಿಕೊಂಡಾಗ ಆಗುತ್ತಿದ್ದ ಮತೀಯತೆ, ಭಾಷೆಯ ಸಂಘರ್ಷಗಳು ಹೀಗೆ ಇನ್ನು ಮುಂತಾದ ಕಾರಣಗಳಿಂದಾಗಿ ಸಾಹಿತ್ಯ ಚಟುವಟಿಕೆಗಳು ಕ್ಷೀಣವಾಗುವ ಮೂಲಕ ಅವರು ಆಸಕ್ತಿ ಕಳೆದುಕೊಂಡಿದ್ದರು. ಅಂತೆಯೇ ಆಂಗ್ಲರು ತಮ್ಮ ಆಡಳಿತ ತಂತ್ರ ದೃಷ್ಟಿಯಿಂದ ರಾಜ್ಯಗಳನ್ನು ಬೇಕುಬೇಕೆನಿಸಿದಾಗಲೆಲ್ಲ ಒಡೆಯುತ್ತಿದ್ದರು. ಅದರಂತೆ ಉತ್ತರ ಕರ್ನಾಟಕವನ್ನು ಮಹಾರಾಷ್ಟ್ರಕ್ಕೆ ಸೇರಿಸಿ ಬಿಟ್ಟಿದ್ದರು. ಇಂಥ ಕ್ರಮಗಳಿಂದಲೂ ಕನ್ನಡ ಸಾಹಿತ್ಯದ ಬೆಳವಣಿಗೆ ಅಡ್ಡಿಗಳಾಗಿದ್ದು, ೧೮೫೭ರ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ ಮುಗಿದ ಬಳಿಕ ಈಸ್ಟ್ ಇಂಡಿಯಾ ಕಂಪನಿಯ ಆಡಳಿತವೂ ಮುಗಿದು ಭಾರತದ ಆಡಳಿತವು ನೇರವಾಗಿ ಇಂಗ್ಲೆಂಡ್ ಆಡಳಿತಕ್ಕೆ ಒಳಗಾಯಿತು. ಆದರೆ ಈ ನಿಟ್ಟಿನಲ್ಲಿ ಬಂಗಾಳದಲ್ಲಿ ರಾಜರಾಮಮೋಹನ್‌ರಾಯರು ಪಾಶ್ಚಾತ್ಯ ವಿದ್ಯಾಭ್ಯಾಸದಿಂದ ಪ್ರಭಾವಿತರಾಗಿ ಭಾರತೀಯರಿಗೂ

ಅದು ದೊರೆಯಬೇಕೆಂದು ಪ್ರತಿಪಾದಿಸುತ್ತಿದ್ದುದ್ದು ಒಂದು ಬಹುಮುಖ್ಯ ಸಂವೇದನೆಯಾಗಿದ್ದು, ಈ ಹಿನ್ನೆಲೆಯಲ್ಲಿ ಚ.ವಾಸುದೇವಯ್ಯ, ಶ್ರೀನಿವಾಸರಾವ್, ಎಸ್.ಜಿ. ನರಸಿಂಹಾಚಾರ್ಯರು ಇನ್ನು ಮೊದಲಾದವರು ೧೮೧೫ರಿಂದಲೂ ಇಂಗ್ಲಿಷ್ ಕವನಗಳನ್ನು ಕನ್ನಡ ಜಾಯಮಾನಕ್ಕೆ ಒಗ್ಗುವಂತೆ ಅನುವಾದ ಮಾಡುವ ಮೂಲಕ ಗಮನಾರ್ಹತೆ ಪಡೆದುಕೊಂಡರು. ಉದಾಹರಣೆಗೆ ಅವರ ಒಂದು ಇಂಗ್ಲಿಷ್ ಶಿಶುಪ್ರಾಸ ಗೀತೆಯನ್ನು ನಾವಿಲ್ಲಿ ಗಮನಿಸಬಹುದು.

**ಇಂಗ್ಲಿಷ್ ಮೂಲ :**

Twinkle, Twinkle, little star
How I wonder what you are?
Up above the world so high
Like a diamond in the sky

**ಕನ್ನಡ ಮೂಲ :**

ಮಿರು ಮಿರುಗುವೆ, ಹಾ, ಕಿರು ತಾರಗೆಯೆ
ಅರಿಯನು ನಾನೆಲೆ ನೀನಾರೊ
ಧರೆಗೆಳಿಯದೆ ನೀನಿರುತಿಹೆ ದೂರದಿ
ನೆರೆ ಹೊಳೆಯುವ ವಜ್ರದ ತೆರದಿ

ಹೀಗೆ ಅವರು ಇನ್ನು ಮೊದಲಾದ ಕವಿತೆಗಳನ್ನು ಅನುವಾದದ ಮೂಲಕ ಕನ್ನಡಕ್ಕೆ ಒಂದು ಹೊಸ ವಾತಾವರಣವನ್ನು ಸೃಷ್ಟಿ ಮಾಡಿದರು. ಆದರೆ ಇವು ಹೊಸಗನ್ನಡದ ಕಾವ್ಯ ರಚನೆಗೆ ಒಂದು ಗಟ್ಟಿಯಾದ ಭದ್ರಬುನಾದಿಯನ್ನು ಒದಗಿಸಲಿಲ್ಲ. ಆದರೂ ಅವರ ಈ ಪ್ರಯತ್ನವು ಮುಂದಿನ ಹೊಸಗನ್ನಡ ಕಾವ್ಯ ರಚನೆಗೊಂದು ಸ್ಫೂರ್ತಿಯನ್ನುಂಟು ಮಾಡಿತು. ಅನಂತರ ಹಟ್ಟಿಹಂಗಡಿ ನಾರಾಯಣರಾಯರು ೧೮೯೮ರ ಹಿಂದಿನಿಂದಲೂ ಬಿಡಿ ಬಿಡಿಯಾಗಿ ರಚಿಸಿದ್ದನ್ನು 'ಆಂಗ್ಲ ಕವಿತಾವಳಿ' ಎಂಬ ಕಾವ್ಯ ಸಂಕಲನದಲ್ಲಿ ಪ್ರಕಟಿಸಿದರು. ಇದು ಹಿಂದೆ ರಚಿಸಿದವರ ಅನುವಾದ ಕವನಗಳಿಗಿಂತ ಸ್ವಲ್ಪಮಟ್ಟಿಗೆ ಉತ್ತಮವಾಗಿದ್ದು ಮುಂದಿನ ಆಧುನಿಕ ಕನ್ನಡ ಸಾಹಿತ್ಯಕ್ಕೊಂದು ಮಾರ್ಗ ಸೂಚಿಯಾಗಿದ್ದು, ಇದು ಹಲವು ವಿದ್ವಾಂಸರ ಗಮನಾರ್ಹತೆ ಪಡೆದುಕೊಂಡಿತು. ಬಳಿಕ ಬಿ.ಎಂ.ಶ್ರೀ ಅವರು ಕೂಡಾ ಆಗಿಂದಾಗ್ಗೆ ತಮ್ಮ ಮನಸ್ಸಿಗೆ, ಕನ್ನಡ ಜಾಯಮಾನಕ್ಕೊಗ್ಗುವ ವರ್ಡ್ಸ್‌ವರ್ತ್, ಶೆಲ್ಲಿ, ಕೀಟ್ಸ್, ಕೋಲ್‌ರಿಡ್ಜ್, ಟೆನಿಸನ್, ಬರ್ನ್ ಇನ್ನು ಮುಂತಾದವರ ಕವನಗಳನ್ನು ತಮ್ಮ ಮನಸ್ಸಿಗೆ ಒಗ್ಗಿದ್ದನ್ನು ೧೯೨೦ ರಿಂದಲೂ ರಚಿಸುತ್ತಾ ಬಂದ ಒಟ್ಟು ೬೩ ಕವನಗಳನ್ನು ಸಂಗ್ರಹಿಸಿ ೧೯೨೬ರಲ್ಲಿ 'ಇಂಗ್ಲಿಷ್ ಗೀತಗಳು' ಎಂಬ

ಹೆಸರಿನಿಂದ ಪ್ರಕಟಿಸಿದರು. ಇದು ವಸ್ತು, ಭಾಷೆ, ಛಂದಸ್ಸು, ಆಶಯಗಳ ದೃಷ್ಟಿಯಿಂದ ಒಂದು ಅತ್ಯುತ್ತಮ ಶ್ರೇಷ್ಠ ಅನುವಾದವೆಂಬ ಹೆಗ್ಗಳಿಕೆಯನ್ನು ಪಡೆದುಕೊಳ್ಳುವ ಮೂಲಕ, ಅವರು ಆಧುನಿಕ ಕನ್ನಡ ಸಾಹಿತ್ಯಕ್ಕೊಂದು ಹೊಸ ಹೆದ್ದಾರಿಯನ್ನು ತೆರೆದರು. ಈ ದೃಷ್ಟಿಯಿಂದ ಅವರನ್ನು ಆಧುನಿಕ ಸಾಹಿತ್ಯದಲ್ಲಿ ಪ್ರಾತಿನಿಧಿಕ ಹರಿಕಾರರೆಂದು ಗುರುತಿಸಲಾಗುವುದು. ಅಂದರೆ ಅವರ ಈ ಪ್ರಯೋಗಶೀಲತೆಯು ಕನ್ನಡ ಸಾಹಿತ್ಯ ಪರಂಪರೆಯಲ್ಲಿಯೆ ಅದುವರೆಗೆ ಯಾವುದೇ ಸ್ಥಾನ–ಮಾನ ಪಡೆಯದೆ ಅಲಕ್ಷತೆ, ಅಪಮೌಲ್ಯೀಕರಣಕ್ಕೆ ಒಳಗಾಗಿದ್ದ ಸಾಮಾನ್ಯ ಹುಲ್ಲುಕಡ್ಡಿಗೂ ಜೀವ ತುಂಬಿದ ಆಂಗ್ಲ ಕವನಗಳನ್ನು ಕನ್ನಡಕ್ಕೆ ಅನುವಾದಿಸಿದ್ದರಿಂದ ಕನ್ನಡ ಸಾಹಿತ್ಯದ ದಿಕ್ಕನ್ನೇ ಬದಲಾಯಿಸಿತು. ಈ ಹಿನ್ನೆಲೆಯಲ್ಲಿ ಕವಿ ಸಮಯ, ಅರ್ಥಲಂಕಾರ, ಸಂಸ್ಕೃತ ಭೂಯಿಷ್ಠವಾದ ಕನ್ನಡ ಶೈಲಿ, ಆ ಶೈಲಿಗೆ ಒಗ್ಗುವ ಬಂಧ, ವರ್ಣವೃತ್ತ, ಕಂದಗಳ ಬಳಕೆ – ಇದು ಅವರ ಹಿಂದಿನ ಸಾಂಪ್ರದಾಯಿಕ ಸಂಕೋಲೆಗಳನ್ನು ಕಡಿದು ಹಾಕಿತು. ಅಂತೆಯೆ ಅಚ್ಚಗನ್ನಡ ನುಡಿಯ ಮೂಲಕ, ಹೊಸಗನ್ನಡ ಛಂದಸ್ಸಿನ ಮಟ್ಟುಗಳಲ್ಲಿ ಅವರು ರಚಿಸಿದ ಸ್ವಾನುಭಾವ ನಿಷ್ಠೆಯ ಭಾವಗೀತೆಗಳು (lyrics) ಸಮೃದ್ಧವಾಗಿ ರಚಿಸಬಲ್ಲ ಕನ್ನಡ ಕವಿಗಳ ಹೊಸ ಪೀಳಿಗೆಯೊಂದು ಹುಟ್ಟಲು ಕಾರಣ ಪುರುಷರಾದರು. ಅವರಲ್ಲಿ ಶ್ರೀ ಕುವೆಂಪು, ದ.ರಾ.ಬೇಂದ್ರೆ, ಡಿ.ವಿ.ಜಿ, ಪು.ತಿ.ನರಸಿಂಹಾಚಾರ್ಯ, ವಿ. ಸೀತಾರಾಮಯ್ಯ, ಜಿ.ಪಿ. ರಾಜರತ್ನಂ, ಕೆ.ಎಸ್. ನರಸಿಂಹಸ್ವಾಮಿ, ಜಿ.ಎಸ್. ಶಿವರುದ್ರಪ್ಪ, ಶ್ರೀ ಚೆನ್ನವೀರಕಣವಿ, ಮಧುರಚೆನ್ನ ಇನ್ನು ಮೊದಲಾದವರು ಪ್ರಮುಖರಾಗಿದ್ದು ಗಮನಾರ್ಹತೆ ಪಡೆದುಕೊಂಡರು. ಇವರು 'ಶ್ರೀ'ಯವರ ಪರಂಪರೆಯ ಸಂವೇದನೆಯ ಹಿನ್ನೆಲೆಯಲ್ಲಿ ಭಾವಗೀತೆ, ಸುನೀತ, ಪ್ರಗಾಥ, ಕಥನ ಕವನ, ಕಾವ್ಯ, ನಾಟಕ, ಕಥೆ ಇನ್ನೂ ಮೊದಲಾದ ಸಾಹಿತ್ಯ ಪ್ರಕಾರಗಳ ಮೂಲಕ ಬರವಣಿಗೆ ಮಾಡಿದರೂ, ಆನಂತರ ತಮ್ಮದೇ ಆದ ಸ್ವಂತಿಕೆಯನ್ನು ಕಂಡುಕೊಂಡರು. ಜೊತೆಗೆ ಅವರು ಪರಂಪರೆಯ ಸಾಹಿತ್ಯವನ್ನು ಪುನರ್‌ಮೌಲ್ಯೀಕರಿಸಿಕೊಳ್ಳುವ ಮೂಲಕ ಒಂದು ಹೊಸ ಸ್ವೋಪಜ್ಞತೆಯ ಹಾದಿಯನ್ನು ಸೃಷ್ಟಿಸಿದರು.

ಈ ನಿಟ್ಟಿನಲ್ಲಿ 'ಶ್ರೀ'ಯವರು ಪಶ್ಚಿಮದ ಷೇಕ್ಸ್‌ಪಿಯರ್ ಮತ್ತು ಗ್ರೀಕ್ ನಾಟಕಗಳನ್ನು ಅಧ್ಯಯನ ಮಾಡಿದ ಸಂವೇದನೆಯ ಫಲದಿಂದ ಸಂಸ್ಕೃತ ಕಾವ್ಯದಲ್ಲಿಲ್ಲದ ಕನ್ನಡ ದುರಂತ ನಾಟಕಗಳನ್ನು ಮೊದಲು ಬರೆದರು. ಅವರು ಈ ನಾಟಕಗಳಿಗೆ ಆರಿಸಿಕೊಂಡ ಆಕರಗಳು, ಪುರಾಣ ಮತ್ತು ಐತಿಹಾಸಿಕ ದ್ರವ್ಯಗಳಾದರೂ ಆಧುನಿಕ ಸಂವೇದನೆಯಿಂದ ಅವುಗಳನ್ನು ಪುನರ್ ಸೃಷ್ಟಿಸಿದರು. ಅವುಗಳಲ್ಲಿ 'ಅಶ್ವತ್ಥಾಮನ್' (೧೯೨೯) ಮತ್ತು 'ಪಾರಸಿಕರು' (೧೯೩೦) ಅವರ ಪ್ರಮುಖ ನಾಟಕಗಳಾಗಿವೆ. ಅವುಗಳಲ್ಲಿದೆ ಅವರು ಸಾಹಿತ್ಯೇತರ ಕ್ಷೇತ್ರದಲ್ಲೂ ಅಷ್ಟೇ ಛಾಪು, ವರ್ಚಸ್ಸಿನ ವ್ಯಕ್ತಿತ್ವವನ್ನು ಹೊಂದಿದ್ದರು. ಅವರು ೧೯೧೧ ರಂದು ಧಾರವಾಡದ

ವಿದ್ಯಾವರ್ಧಕ ಸಂಘದಿಂದ ಮಾಡಿದ "ಕನ್ನಡ ಮಾತು ತಲೆಯೆತ್ತುವ ಬಗೆ" ಸಾಂಸ್ಕೃತಿಕ ಮತ್ತು ಐತಿಹಾಸಿಕ ದೃಷ್ಟಿಯಿಂದ ತುಂಬ ಮೌಲಿಕವಾಗಿದ್ದು, ಅಷ್ಟೇ ಅಲ್ಲದೆ ಅವರು ನಾಡುನುಡಿ, ಸಂಸ್ಕೃತಿ, ರಾಷ್ಟ್ರೀಯ ಪ್ರಜ್ಞೆ, ಸ್ವಾತಂತ್ರ್ಯ, ಸಾಹಿತ್ಯವನ್ನು ಕುರಿತು ಮಾತನಾಡಿದ ಇನ್ನು ಮುಂತಾದ ಭಾಷಣಗಳು ಕೂಡ ತುಂಬ ಬೆಲೆಯುಳ್ಳವು. ಒಟ್ಟಿನಲ್ಲಿ ಅವರು ಆಧುನಿಕ ಕನ್ನಡ ಸಾಹಿತ್ಯದ ಒಬ್ಬ ಮೊದಲ ಶ್ರೇಷ್ಠ ಪ್ರಾತಿನಿಧಿಕ ಕವಿ, ನಾಟಕಕಾರರಾಗಿ, ಸತ್ವದ ಗದ್ಯ ಬರಹಾರರಾಗಿ, ನಾಡುನುಡಿಯ ಪ್ರಮುಖ ಚಿಂತಕರಾಗಿ ತುಂಬ ಮಹತ್ವದ ಕಾಣಿಕೆಗಳನ್ನು ನೀಡುವ ಮೂಲಕ ಕನ್ನಡ ಸಾಹಿತ್ಯಕ್ಕೆ ತುಂಬ ಮಹತ್ವದ ಸ್ಥಾನವನ್ನು ಒದಗಿಸಿಕೊಟ್ಟರೆಂದು ಗುರುತಿಸಬಹುದು.

ಹಾಗೆಯೆ ಇವರೊಂದಿಗೆ ಬರವಣಿಗೆ ಆರಂಭಿಸಿದ ಶ್ರೀ ಬಸವಪ್ಪಶಾಸ್ತ್ರಿಯವರು ಇಂಗ್ಲಿಷ್ ಬಾರದಿದ್ದರೂ ಶೇಕ್ಸ್‌ಪಿಯರ್‌ನ 'ಒಥೆಲೋ' ನಾಟಕವನ್ನು ಇಂಗ್ಲಿಷ್ ಬಲ್ಲವರಿಂದ ಕೇಳಿ ತಿಳಿದುಕೊಂಡು 'ಶೂರಸೇನ ಚರಿತ್ರೆ' ಎಂಬ ನಾಟಕವನ್ನು ಬರೆದರು. ಎಂ.ಎಸ್. ಪುಟ್ಟಣ್ಣ ಅವರು ಇಂಗ್ಲಿಷ್‌ನ 'ಕಿಂಗ್‌ಲಿಯರ್'ನ್ನು 'ಹೇಮಚಂದ್ರವಿಲಾಸ' (೧೮೮೯) ಎಂದೂ, ಎಂ.ಎಲ್. ಶ್ರೀಕಂಠೇಗೌಡರು ಇಂಗ್ಲಿಷ್‌ನ ಮ್ಯಾಕ್‌ಬೆತ್‌ನ್ನು 'ಪ್ರತಾಪ ರುದ್ರದೇವ' (೧೮೯೫) ಎಂದೂ, ಎ. ಆನಂದರಾವ್ ಅವರು 'ದಿ ಮರ್ಚೆಂಟ್ ಆಫ್ ವೆನ್ನಿಸ್'ನ್ನು 'ಪಾಂಚಲೀಪರಿಣಯ' (೧೮೯೦) ಎಂದೂ ಇನ್ನು ಮೊದಲಾದ ಪ್ರಮುಖ ನಾಟಕಗಳನ್ನು ಕನ್ನಡಕ್ಕೆ ತಂದುಕೊಂಡು, ವಸಾಹತುಶಾಹಿ ಸಂಸ್ಕೃತಿಯನ್ನು ವಿಧಿಯಿಲ್ಲದೆ ಧ್ಯಾನಿಸುವ ಮೂಲಕ, ಸ್ವಾತಂತ್ರ್ಯ, ರಾಷ್ಟ್ರೀಯತೆ, ಪ್ರೀತಿ, ಪ್ರೇಮ, ಪ್ರಕೃತಿ, ನಾಡು – ನುಡಿಯನ್ನು ಸೂಕ್ಷ್ಮವಾಗಿ ಮೂಡಿಸುವ ಪ್ರಯತ್ನವನ್ನು ಮಾಡಿದರು.

ಒಟ್ಟಿನಲ್ಲಿ ಈ ಪಾಶ್ಚಾತ್ಯ ಪ್ರೇರಣೆ – ಪ್ರಭಾವವು ದೇಶಿಯ ರಾಜಕೀಯ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ಸಾಂಸ್ಕೃತಿಕ ಮತ್ತು ಸಾಹಿತ್ಯಿಕ ಹಿನ್ನೆಲೆಯಲ್ಲಿ ತುಂಬ ಮಹತ್ವದ ಪಾತ್ರವನ್ನು ವಹಿಸುವ ಮೂಲಕ ಒಂದು ಸತ್ವಯುತವಾದ ಪರಂಪರೆಯೊಂದನ್ನು ರೂಪಿಸಿತು. ಅಂತೆಯೇ ಇದು ಭಾರತದ ಮತ್ತು ಕರ್ನಾಟಕದ ಇತಿಹಾಸದಲ್ಲಿ ಒಂದು ಅವಿಸ್ಮರಣೀಯವಾದ ಚರಿತ್ರೆಯನ್ನು ಕೂಡಾ ಬರೆಯಿತೆಂದು ಗುರುತಿಸಬಹುದು.

**೩. ಪೌರ್ವಾತ್ಯ (ದೇಶೀಯ) ಪ್ರೇರಣೆ – ಪ್ರಭಾವಗಳ ವಿಚಾರಗಳು :**

ಆಧುನಿಕ ಕನ್ನಡ ಸಾಹಿತ್ಯವನ್ನು ರೂಪಿಸುವಲ್ಲಿ ಪಾಶ್ಚಾತ್ಯ ಪ್ರೇರಣೆ – ಪ್ರಭಾವದಷ್ಟೇ ಪೌರ್ವಾತ್ಯ ಸಂವೇದನೆಯು ಕೂಡಾ ಅಷ್ಟೇ ತುಂಬ ಮಹತ್ವದ ಪಾತ್ರವನ್ನು ವಹಿಸಿತು. ಭಾರತೀಯರು ತಮ್ಮನ್ನು ಆಳಲು ಬಂದ ಆಂಗ್ಲ ಸಾಮ್ರಾಜ್ಯಶಾಹಿತ್ವ ಮತ್ತು ವಸಾಹತುಶಾಹಿಯ ಸಂಸ್ಕೃತಿ ನೀತಿಯಿಂದ ಬೇಸತ್ತು ಅದರಿಂದ ಬಿಡುಗಡೆ ಹೊಂದಲು ದೇಶಿಯ ಪರಂಪರೆಯ

ಒಂದು ಸತ್ವಯುತವಾದ ಮಾರ್ಗವೊಂದು ಅವರಿಗೆ ಅವಶ್ಯಕತೆ ಇತ್ತು. ಈ ಹಿನ್ನೆಲೆಯಲ್ಲಿ ವಿಭೂತಿಪುರುಷರು, ವೇದೋಪನಿಷತ್ತು ಪುರಾಣ ಮತ್ತು ಇತಿಹಾಸ, ಸೈದ್ಧಾಂತಿಕ ಚಿಂತಕರು, ನಾಡು – ನುಡಿಯ ಪ್ರೀತಿ ಮತ್ತು ಸಾಂಸ್ಕೃತಿಕ ಪರಂಪರೆ, ರಾಷ್ಟ್ರೀಯ ಪ್ರಜ್ಞೆ, ಸ್ವಾತಂತ್ರ್ಯ ಇನ್ನೂ ಮುಂತಾದ ಪ್ರಮುಖ ಅಂಶಗಳು ತುಂಬ ಪ್ರಭಾವನ್ನುಂಟು ಮಾಡಿದವು.

**೩.೧. ವಿಭೂತಿ ಪುರುಷರ ಪ್ರೇರಣೆಯ ವಿಚಾರಗಳು :**

ವಿಭೂತಿ ಪುರುಷರ ಪ್ರೇರಣೆ – ಪ್ರಭಾವವು ತುಂಬ ಪ್ರಮುಖವಾಗಿದ್ದು, ಅವರು ಭಾರತೀಯರಿಗೆ ಅಗತ್ಯವಾಗಿದ್ದ ಒಂದು ಸತ್ವಪೂರ್ಣವಾದ ಸಾಂಸ್ಕೃತಿಕ ಮನೋಧರ್ಮವೊಂದನ್ನು (ಸಿದ್ಧಪಡಿಸಿದರು) ಒದಗಿಸಿದರು. ಅವರಲ್ಲಿ ಬುದ್ಧ, ಬಸವಣ್ಣ, ರಾಮಕೃಷ್ಣ ಪರಮಹಂಸ, ವಿವೇಕಾನಂದ, ಅರವಿಂದ, ಮಹಾತ್ಮಗಾಂಧೀ ಇನ್ನು ಮುಂತಾದ ದಾರ್ಶನಿಕರು ಪ್ರಮುಖರಾಗಿದ್ದಾರೆ. ಇವರ ಆಧ್ಯಾತ್ಮಿಕ ಚಿಂತನೆ, ದರ್ಶನ, ತಪಸ್ಸು, ಯೋಗ, ಅಹಿಂಸೆ, ಶಾಂತಿ, ಪೂರ್ಣದೃಷ್ಟಿ, ನಿರಪೇಕ್ಷ ಧರ್ಮ, ಪ್ರತಿಫಲಾಪೇಕ್ಷೆ ಇಲ್ಲದ ಪೂಜೆ, ಭಕ್ತಿ, ನಿರ್ಮತ್ಸರ ಪ್ರೀತಿ, ಉಪಾಸನೆ, ಆರಾಧನೆ, ಪ್ರಕೃತಿಯ ಪ್ರೀತಿ, ಸಮಷ್ಠಿಯ ಪ್ರಜ್ಞೆ, ಪೂರ್ಣ ವಿಶ್ರಾಂತಿ, ತಾದಾತ್ಮ್ಯ ಭಾವನೆ, ಸದ್ಭಾವನೆ, ಸನ್ನಡತೆ, ಸಚ್ಚಾರಿತ್ರ್ಯತೆ, ಸಹೋದರತ್ವ, ವಿಶ್ವಭ್ರಾತೃತ್ವ, ಸರ್ವೋದಯ, ಸಮನ್ವಯ, ಗ್ರಾಮ ಸ್ವರಾಜ್ಯ, ಹರಿಜನೋದ್ಧಾರ, ಆದಮ್ಯ ಮಾನವೀಯ ಪ್ರೀತಿ – ಹೀಗೆ ಇನ್ನು ಮುಂತಾದ ಶ್ರೇಷ್ಠ ಕವಿಗಳು ತಂತಮ್ಮ ಬದುಕು – ಬರಹಗಳೆರಡರಲ್ಲೂ ಮೈಗೂಡಿಸಿಕೊಂಡಿದ್ದಾರೆ. ಅವರಲ್ಲಿ ಕುವೆಂಪು ಅವರು ತಮ್ಮ 'ವಿಭೂತಿಪೂಜೆ', 'ಶ್ರೀ ರಾಮಕೃಷ್ಣ ಪರಮಹಂಸ', 'ಸಮಗ್ರಕಾವ್ಯ' ಮತ್ತು ಕಾದಂಬರಿಗಳಲ್ಲಿ ಸತ್ವಪೂರ್ಣವಾಗಿ ಮೂಡಿಸುವ ಪ್ರಯತ್ನ ಮಾಡಿದ್ದಾರೆ. ಅಂತೆಯೆ ಅವರಿಗೆ ಸ್ವಾಮಿ ವಿವೇಕಾನಂದ, ಅರವಿಂದ, ಗಾಂಧೀಜಿ ಅವರ ದಟ್ಟ ಪ್ರಭಾವವಿದ್ದು, ಅದನ್ನು ಕೂಡಾ ಅವರು ತಮ್ಮ ಬಿಡಿಕವಿತೆಗಳಲ್ಲಿ ಕೂಡಾ ಪ್ರತ್ಯೇಕವಾಗಿ ಮೂಡಿಸಿದ್ದಾರೆ. ಉದಾ. 'ಕವಿ ಋಷಿ ಸಂತರ ಆದರ್ಶದಲಿ ಸರ್ವೋದಯವಾಗಲಿ ಸರ್ವರಲಿ!' (ಕನ್ನಡ ಡಿಂಡಿಮ), "ಇವನು ಹೇಳುವ ವಿಷಯ, ಇವನ ಮೇಣ್ ಇವನ ಮಾತಿನ ತೆರದಿ, ದಿನದಿನದ ಸರಳ ಸಾಧಾರಣದ ಬಡಹೊಟ್ಟೆ ಪಾಡಿನದು! ಆದರೂ ದರುಶನಕೆ ಮುತ್ತಿಹರು ಮಾನವರು, . . . . ಸರಳ ಜೀವನದ ದೇವತ್ವರಾಧನೆಗೆ! (ಸಭ್ಯತಾ ದೇವತೆ!) ಗಾಂಧೀಯನ್ನು 'ಅಭಿನವ ಬುದ್ಧ', 'ಕಲ್ಕಿ; ಎಂದರು. 'ಮತ್ತೊಂದು ಕಡೆ 'ಹರಿದತ್ತ ಹರಿಯ ಚಿತ್ರ, ಈ ಧೀರ ನಡೆವನತ್ತ", "ಮರೆವುದೆಂದಾ ನಮ್ಮ ಸ್ವತಂತ್ರ ಶಿಲ್ಪಿಯ" ಎಂದರು. 'ಭಾರತ ಜನನಿಯ ತನುಜಾತೆ', 'ಶ್ರೀ ಸಾಮಾನ್ಯ'ವೆ ಭಗವಾನ್ ಮಾನ್ಯಂ! ಶ್ರೀ ಸಾಮಾನ್ಯನೆ ಭಗವದ್ ಧನ್ಯ! ಶ್ರೀ ಸಾಮಾನ್ಯತೆ ಭಗವಂತನ ರೀತಿ; ಸಾಮಾನ್ಯವೆ ದಿಟ ಭಗವತ್ ಪ್ರೀತಿ! 'ಶ್ರೀ ರಾಮಾಯಣದರ್ಶನಂ' ಹೀಗೆ ಇನ್ನು ಮುಂತಾದ ಪ್ರಮುಖ ಕೃತಿಗಳಲ್ಲಿ ಪೂರ್ಣ ದೃಷ್ಟಿ, ಶ್ರೀ ಸಾಮಾನ್ಯತೆ, ರಾಷ್ಟ್ರೀಯ ಪ್ರಜ್ಞೆ, ಬದುಕಿನ ಸರಳತೆಯನ್ನು ಕಾಣಿಸಿದ್ದಾರೆ : ಅಂತೆಯೆ ಇವರ ಸಮಕಾಲೀನರಾಗಿ ಬದುಕಿ ಬಾಳಿನ ಮತ್ತೊಬ್ಬ ದೈತ್ಯ

ಪ್ರತಿಭೆ ದ.ರಾ. ಬೇಂದ್ರೆ ಅವರಿಗೆ ಬಂಗಾಳಿಯ ವಿಭೂತಿ ಪುರುಷ ರವೀಂದ್ರರು ಆರಾಧ್ಯ ದೈವವಾಗಿದ್ದು. ಅವರ ಬದುಕು – ಬರೆಹಗಳೆರಡರಲ್ಲೂ ಅವರ ದಟ್ಟ ಪ್ರಭಾವವನ್ನು ನಾವು ಕಾಣಬಹುದು. ಅದರ ಪ್ರತೀಕವಾಗಿ ಅವರ ಕಾವ್ಯಗಳಲ್ಲಿ ದಟ್ಟ ಛಾಯೆಯಾಗಿ ಗಮನಾರ್ಹತೆ ಪಡೆದುಕೊಂಡಿದ್ದು. ಅವರ ಬದುಕಿನ ಮೌಲ್ಯಗಳಿಗೆ ನುಡಿಕೊಡುವ ಮೂಲಕ ಬದುಕಿನ ಬವಣೆಗಳನ್ನು ವಿಶಿಷ್ಟವಾಗಿ ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ.

ಉದಾ:

"ನುಡಿದು ಬೇಸತ್ತಾಗ ದುಡಿದುಡಿದು ಸತ್ತಾಗ
ಜನಕ ಹಿಗ್ಗಿನ ಹಾಡ ನೀಡಾಽವ (ಹರಿ, ಪುಟ. ೪)

"ಎನ್ನ ಪಾಡೆನಗರಿಲಿ ಅದರ ಹಾಡನ್ನಷ್ಟೆ
ನೀಡುವೆನು ರಸಿಕ ನಿನಗೆ!' (ಸಖೀಗೀತ, ಪುಟ. ೨)

"ಕಲ್ಲು ಸಕ್ಕರೆಯಂಥ ನಿನ್ನೆದೆಯು ಕರಗಿದರೆ
ಆ ಸವಿಯ ಹಣಿಸು ನನಗೆ (ನಾದಲೀಲೆ, ಪುಟ. ೬೫)

ಹೀಗೆ ಅವರು ತಮ್ಮ ಅನೇಕ ಪ್ರಮುಖ ಕವನಗಳಲ್ಲಿ, ಅವರ ವಿಚಾರ – ವಿಮರ್ಶೆಯ ಬೃಹತ್ ಸಂಗ್ರಹವಾದ "ಸಾಹಿತ್ಯ ವಿರಾಟ್ ಸ್ವರೂಪ" ಕೃತಿಗಳಲ್ಲಿ ಅರವಿಂದರ ತಾತ್ತ್ವಿಕ ಚಿಂತನೆ, ಉಪನಿಷತ್ತು, ಸಾಂಖ್ಯತತ್ವ, ವಿಶಿಷ್ಟಾದ್ವೈತತತ್ವ, ಪುರಾಣ, ಮಿತ್‌ಗಳನ್ನು ಕಂಡುಂಡ ಜನಪದ ಬದುಕನ್ನು ಕರಗಿಸಿ ಸೃಜನಾತ್ಮಕ ವಿಮರ್ಶೆಯಿಂದ ಹಿಡಿದಿಡುವ ಪ್ರಯತ್ನ ಮಾಡಿದ್ದಾರೆ. ಇವರಂತೆಯೆ ಸಮಕಾಲೀನರಾಗಿ ಬದುಕಿದ ಮತ್ತೊಬ್ಬ ಮಹತ್ವದ ಕವಿ ಪು.ತಿ.ನರಸಿಂಹಾಚಾರ್ಯರೂ ಸಹ ವೇದೋಪನಿಷತ್ತು, ಪುರಾಣ, ಮಹಾಭಾರತ ಮತ್ತು ರಾಮಾಯಣ ಹೀಗೆ ಇನ್ನು ಮುಂತಾದ ಸಂಸ್ಕೃತ ಸಾಹಿತ್ಯ ಮತ್ತು ಕವಿಗಳಿಂದ ಸಾಕಷ್ಟು ಪ್ರೇರಣೆ ಪ್ರಭಾವವನ್ನು ಪಡೆದುಕೊಂಡವರು. ಅದನ್ನು ಅವರು ತಮ್ಮ 'ಮಲೆದೇಗುಲ', 'ಗಣೇಶದರ್ಶನ', 'ಶಾರದಯಾಮಿನಿ', 'ಅಹಲ್ಯೆ', 'ಹಣತೆ', 'ಹಳೆಯಬೇರು ಹೊಸಚಿಗುರು', 'ಗೋಕುಲ ನಿರ್ಗಮನ' ಇನ್ನು ಮೊದಲಾದ ಪ್ರಮುಖ ಕೃತಿಗಳಲ್ಲಿ ಮೂಡಿಸಿದ್ದಾರೆ.

**ಉದಾ :**

ಎನ್ನದು ತತ್ವಾನ್ವೇಷಣೆ ಕಾರ್ಯ
ಏನೇತಕೆ ಎಂಬುದೆ ಹವ್ಯಾಸ
ಇದನುಳಿದಾಗದು ಪದವಿನ್ಯಾಸ (ಅಹಲ್ಯೆ 'ಅರ್ಪಣೆಯಲ್ಲಿ')

ಈ ಲೋಕದ ವಸ್ತುಗಳು ನೀಡುವ ಪ್ರಭಾವದ ಬಲವನ್ನು ಅದು ತಮಗೆ ಲಭಿಸಿದಂತೆ ಸುಮ್ಮನೆ ಒಪ್ಪಿಕೊಂಡು, ಅದನ್ನು ತನ್ನ ಹಾಗೂ ಪರರ ಆನಂದಕ್ಕಾಗಿ ಎತ್ತಿ ಹಿಡಿಯುವಷ್ಟರಲ್ಲಿಯೇ ಇವರ ಕಾವ್ಯ ನಿಲ್ಲುವುದಿಲ್ಲವೆಂಬುದು ಗಮನಾರ್ಹಪಡಿಸಿದ್ದಾರೆ.

ಒಟ್ಟಿನಲ್ಲಿ ಹೀಗೆ ಶ್ರೀ ಕುವೆಂಪು, ಶ್ರೀ ದ.ರಾ.ಬೇಂದ್ರೆ, ಪು.ತಿ.ನ., ಡಿ.ವಿ. ಗುಂಡಪ್ಪ ಇನ್ನು ಮೊದಲಾದ ನವೋದಯದ ಶ್ರೇಷ್ಠ ಕವಿಗಳು ಪುನರುತ್ಥಾನ ಹರಿಕಾರರಾದ ವಿಭೂತಿ ಪುರುಷರ ಆದರ್ಶಗಳ ಸಂವೇದನೆಯ ಹಿನ್ನೆಲೆಯಲ್ಲಿ ಸನಾತನ ಹಿಂದೂ ಧರ್ಮದ ಸತ್ತ್ವಗಳನ್ನು ಉಳಿಸಿಕೊಳ್ಳುವ ಮತ್ತು ಆ ಚೌಕಟ್ಟಿನಲ್ಲಿ ಬೆಳೆದ ಕಂದಾಚಾರಗಳನ್ನು ಕಿತ್ತು ಹಿಂದೂ ಧರ್ಮವನ್ನು ಶುದ್ಧೀಕರಿಸುವ ಪ್ರಯತ್ನ ಮಾಡಿದ್ದಾರೆಂಬುದು ಗಮನಾರ್ಹ.

**೩.೨ ವೇದೋಪನಿಷತ್ತಿನ ಹಿನ್ನೆಲೆಯ ಪ್ರಭಾವದ ವಿಚಾರಗಳು :**

ಆಧುನಿಕ ಕನ್ನಡ ಸಾಹಿತ್ಯವನ್ನು ರೂಪಿಸುವ ಹಿನ್ನೆಲೆಯಲ್ಲಿ ವೇದೋಪನಿಷತ್ತುಗಳ ಪಾತ್ರವು ಕೂಡ ತುಂಬ ಹಿರಿದಾದದ್ದು. ಈ ಹಿನ್ನೆಲೆಯಲ್ಲಿ ಪೂರ್ಣ ಜೀವನ ದೃಷ್ಟಿ, ಅಜ್ಞಾನವನ್ನು ಸಂಪೂರ್ಣವಾಗಿ ನಾಶಗೊಳಿಸಿ ಶಾಶ್ವತವಾದುದನ್ನು ಪಡೆಯಲು ಸಹಾಯಕವಾಗುವ ಮಾತುಗಳೇ ಉಪನಿಷತ್ತು. ಈ ಸಂವೇದನೆಯನ್ನು ರಾಮಕೃಷ್ಣ ಪರಮಹಂಸರ ವಾತಾವರಣದಲ್ಲಿ ಬೆಳೆದ ಕುವೆಂಪು ಅವರು ಕಾವ್ಯ, ನಾಟಕ, ಕಾದಂಬರಿ, ವಿಚಾರ-ವಿಮರ್ಶೆಯ ಕೃತಿಯಲ್ಲಿ ಪೂರ್ಣ ದೃಷ್ಟಿ, ಪೂರ್ಣ ವಿಶ್ರಾಂತಿ, ಸಮನ್ವಯ ಪ್ರಜ್ಞೆ, ಸಮಷ್ಠಿ ಪ್ರಜ್ಞೆ, ಮಾನವೀಯ ಪ್ರೇಮ, ನಿರಪೇಕ್ಷ ಧರ್ಮ, ಅಹಿಂಸೆ ಹೀಗೆ ಇನ್ನು ಮೊದಲಾದ ತಾತ್ತ್ವಿಕ ಚಿಂತನೆಯ ರೂಪದಲ್ಲಿ ಬಳಸಿಕೊಂಡಿದ್ದಾರೆ. ಅಂತೆಯೇ ಡಿ.ವಿ. ಗುಂಡಪ್ಪ ಅವರ 'ಮಂಕುತಿಮ್ಮನ ಕಗ್ಗ; (೧೯೪೩)ವು ಉಪನಿಷತ್ತಿನ ಮೂರ್ತಿ ಸ್ವರೂಪದಂತಿರುವ ಒಂದು ಶ್ರೇಷ್ಠ ಕೃತಿ. ಹಾಗೆಯೆ ಇದು ಎಲ್ಲರಿಗೂ ಬಂದೊದಗುವ ಆಘಾತಗಳನ್ನು ಜೀವನ ಕ್ಲೇಷಗಳನ್ನು ಎದುರಿಸಲು ಪುನಃ ಸ್ಥೈರ್ಯವನ್ನುಂಟು ಮಾಡುವ ಹಿತ ಬೋಧನೆಯ ಆಕೃತಿ. ಅಲ್ಲದೆ ಅದು ಮನಸ್ಸು ಕುಗ್ಗಿದಾಗ ಪ್ರತಿಯೊಬ್ಬರಿಗೂ ಸಾಂತ್ವಾನ ನೀಡುವ ಅಪೂರ್ವ ವಚನ ಸಂಗ್ರಹ ಎಂದು ಗುರುತಿಸಿಕೊಂಡಿದೆ.

**ಉದಾ :**

ಒಲ್ಲೆನೆನದಿರು ಬಾಳನ್, ಒಲವದೇನೆನದಿರು
ಉಲ್ಲಾಸಕೆಡೆ ಮಾಡು ನಿನ್ನಿನಾದನಿತು
ನಿಲ್ಲು ಕೆಚ್ಚೆದೆಯಿಂದಲನ್ವಾಯಗಳನಳಿಸೆ
ಎಲ್ಲಿಕಂ ಸಿದ್ಧನಿರು – ಮಂಕುತಿಮ್ಮ

ಹೀಗೆ ಬದುಕಿನ ಕಗ್ಗವನ್ನು ಬಿಡಿಸಿ ಸಾಂತ್ವಾನ ನೀಡುವ ಒಂದು ಅಪೂರ್ವ ಕೃತಿಯಾಗಿದ್ದು ತುಂಬ ಗಮನಾರ್ಹತೆ ಪಡೆದುಕೊಂಡಿದೆ.

**೩.೩ ಚರಿತ್ರೆ ಮತ್ತು ಪುರಾಣ ಪ್ರಜ್ಞೆಯ ಪ್ರಭಾವದ ವಿಚಾರಗಳು :**

ಚರಿತ್ರೆ ಮತ್ತು ಪುರಾಣವೂ ಸಹ ಆಧುನಿಕ ಕನ್ನಡ ಸಾಹಿತ್ಯವನ್ನು ರೂಪಿಸಿದ ಪ್ರಮುಖ ಆಕರಗಳಲ್ಲೊಂದಾಗಿದ್ದು, ಈ ಕುರಿತು ಜಿ.ಎಸ್. ಶಿವರುದ್ರಪ್ಪ ಅವರು 'ಮುಂದಕ್ಕೆ ಚಲಿಸುತ್ತಿದ್ದರೆ ಅದು ಚರಿತ್ರೆ ನಿಂತು ಮಡುಗಟ್ಟಿದರೆ ಪುರಾಣ'ವೆಂದು ಗುರುತಿಸಿದರೆ, ಶಿವರಾಮಯ್ಯ ಅವರು : 'ಸಾಮ್ರಾಜ್ಯಶಾಹಿ ಚರಿತ್ರೆಗಳು, ವಸಾಹತುಶಾಹಿ ಜನರ ಆಲೋಚನೆಗಳನ್ನು ಗ್ರಹಿಕೆಗಳನ್ನು ತಿದ್ದಲು ಇಲ್ಲವೆ ಅಳಿಸಿ ಹಾಕಲು ಬರೆಯಲ್ಪಟ್ಟವು. ಅಂದರೆ ಭಾರತೀಯರು ಅನಾಗರೀಕರೂ, ಹಾವಾಡಿಗರೂ, ಮಾಂತ್ರಿಕರೂ, ಡೋಂಗಿಗಳೂ ಮತ್ತು ಭಿಕ್ಷುಕರೂ ಎಂದು ಹೀನಾಯಿಸುವ ಮೂಲಕ ಉಚ್ಚರಿಸುವ ವ್ಯಾಖ್ಯಾನ ಪ್ರವೃತ್ತಿ ಒಂದು, ಎರಡು, ಹಾಗಾದರೆ ನಮ್ಮದೆನ್ನುವುದು ಏನೂ ಇಲ್ಲವೆ? ಎಂದು ಸಾಮ್ರಾಜ್ಯಶಾಹಿ ಚರಿತ್ರೆಕಾರರಿಗೆ ತದ್ವಿರುದ್ಧವಾದ ವಾದಗಳನ್ನು ಮೂಡಿಸಲು ಗತವೈಭವಗಳನ್ನು ಚಿತ್ರಿಸಲು ಬರೆದರು. ಮೂರನೆಯದು, ಪ್ರಭುತ್ವಗಳ ಬದಲಾವಣೆ ಪ್ರಕ್ರಿಯೆಗಳು ಆರ್ಥಿಕ ಮತ್ತು ಸಾಮಾಜಿಕ ಸಂರಚನೆಯ ಗಾಢ ಪರಿಣಾಮವನ್ನುಂಟು ಮಾಡುವುದುಂಟು. ಇದನ್ನು ವ್ಯಾಖ್ಯಾನಿಸಲು ಚರಿತ್ರೆಯನ್ನು ಬರೆಯುವ ಅಗತ್ಯವುಂಟಾಯಿತು. ನಾಲ್ಕನೆಯದು, ಮೇಲಿನ ಮೂರು ವಿಧಾನಗಳನ್ನು ವರ್ಜಿಸಿ ನಮ್ಮ ಚರಿತ್ರೆಯನ್ನು ಬರೆಯಲು ನಮ್ಮ ಮಾನದಂಡಗಳೇ ಸಾಕೆಂದು ಬರೆಯಲಾಯಿತು. ಅಂದರೆ ಇದನ್ನು ಗತ ವೈಭವೀಕರಣವಿಲ್ಲದೆ ವಸ್ತುನಿಷ್ಠವಾಗಿ ಬರೆಯುವುದು ಸ್ವವಿಮರ್ಶೆ ಆಗಿದೆ" ಎಂದು ಗಮನಾರ್ಹಪಡಿಸುವರು. ಅಂದರೆ ಈ ಸಂವೇದನೆಯಿಂದ ನವೋದಯ ಸಾಹಿತ್ಯವು ರಾಷ್ಟ್ರಾಭಿಮಾನ, ಸ್ವಾಭಿಮಾನ ಪ್ರಜಾಸತ್ತಾತ್ಮಕ ದೃಷ್ಟಿಯಿಂದ ತಮ್ಮ ಸೃಜನಶೀಲ ಆಕೃತಿಗಳ ಮೂಲಕ ಪುನರ್‌ರಚಿಸುವ ದಿಟ್ಟ ಪ್ರಯತ್ನವನ್ನು ಮಾಡಿದರೆಂಬುದು ನಾವಿಲ್ಲಿ ಮನಗಾಣಬಹುದು.

"ಇವಳ ಸೊಬಗನವಳು ತೊಟ್ಟು, ನೋಡ ಬಯಸಿವೆ ;
ಅವಳ ತೊಡಿಗೆ ಇವಳಿಗಿಟ್ಟು ಹಾಡಬಯಸಿದೆ .........." (ಕಾಣಿಕೆ, ಬಿ.ಎಂ.ಶ್ರೀ)

ನವಯುಗ ಪದ್ಧತಿ ನವಸ್ತ್ರೀ ಪುರುಷರ ನವರಂಗಾಟಗಳೆಚ್ಚಮ್ತು!
ನವನವೀನ ಕೌತುಕ ಜಿಗವಾಯು ।
ಕನ್ನಡ ನಾಡಿನ ಕನ್ನಡ ಜನರಿಗೆ ಕನ್ನಡ ಭಾಷೆಯ ಮರೆತೋಯ್ತು!
ವರಕನ್ನಡ ಇಂಗ್ಲಿಷ್ ಬೆರೆತೋಯ್ತು ।"

(ಸ್ವಾತಂತ್ರ್ಯದ ಸಮರದ ಗೇಯ ಗೀತೆಗಳು, ಪುಟ. ೧೨೫, ಕ.ಸಾ.ಅ)

"ಭಾರತ ಜನನಿಯ ತನುಜಾತೆ
ಜಯಹೇ ಕರ್ನಾಟಕ ಮಾತೆ!"

(ಜಯ ಕರ್ನಾಟಕ ಮಾತೆ – ಸಮಗ್ರ ಕಾವ್ಯ –ಪುಟ ೧೧೦೬ ಕುವೆಂಪು)

"ನಡೆ ಮುಂದೆ, ನಡೆ ಮುಂದೆ
ನುಗ್ಗಿ ನಡೆ ಮುಂದೆ
ಜಗ್ಗದೆಯೆ ಕುಗ್ಗದೆಯೆ ನುಗ್ಗಿ ನಡೆ ಮುಂದೆ"

(ಪಾಂಚಜನ್ಯ ಸಮಗ್ರ ಕಾವ್ಯ – ಪುಟ ೧೧೧, ಕುವೆಂಪು)

ಹೀಗೆ ಇದನ್ನು ಸಾಧಿಸಲು ನಮ್ಮ ಚರಿತ್ರೆಯಲ್ಲಿಯೇ ದೊರೆಯುವ ಶಕ್ತಿಯನ್ನು ಪಡೆಯೋಕೆ, ಆರಿಸಿಕೊಳ್ಳೋಕೆ ಪ್ರಯತ್ನ ಮಾಡಲಾಯಿತು. ಈ ಪ್ರಯತ್ನದ ಫಲದಿಂದ ಹೊಸಗನ್ನಡದ ಸಮೃದ್ಧ ಸಾಹಿತ್ಯ ಬೆಳೆ ಬಂದಿತೆಂಬುದು ಗಮನಾರ್ಹ.

ನವೋದಯ ಸಂದರ್ಭದಲ್ಲಿ ರೂಪುಗೊಂಡ ಭಾರತದ ರಾಷ್ಟ್ರ ಕಲ್ಪನೆಯಲ್ಲಿ ಮಹತ್ವದ ವ್ಯತ್ಯಾಸಗಳಿವೆ. ಡಿ.ಆರ್. ನಾಗರಾಜ ಅವರು ಇದನ್ನು ಹೀಗೆ ಗುರುತಿಸಿದ್ದಾರೆ : "ಒಂದು, ಗಾಂಧೀಜಿ ಚಿಂತಿಸಿದ ಕಲ್ಪಿಸಿದ ಭಾರತ : ಇನ್ನೊಂದು ರಾಷ್ಟ್ರೀಯವಾದಿಗಳು ಕಲ್ಪಿಸಿದ ಭಾರತ. ಇವೆರಡೂ ಸತ್ವದಲ್ಲಿ ರೂಪದಲ್ಲಿ ಬೇರೆ ಬೇರೆ ಹಿಂದೂ ರಾಷ್ಟ್ರ ಕಲ್ಪನೆಗೆ ಮೂಲ ಪುರುಷ ವಿವೇಕಾನಂದ, ತಿಲಕ್ ಮುಂತಾದವರು. ಇದು ಕ್ಷಾತ್ರವನ್ನು ಅಪೇಕ್ಷಿಸುತ್ತದೆ. ಬ್ರಿಟಿಷರಿಗೆ ಈ ಕ್ಷಾತ್ರ ಕಂಡರೆ ಭಯವಿಲ್ಲ. ಆದರೆ ಗಾಂಧೀಯ 'ಹೆಣ್ಣಿನ' ಭಾರತವನ್ನು ಕಂಡರೆ ಅವರಿಗೆ ಹೆದರಿಕೆ. ಇಲ್ಲಿ 'ಹೆಣ್ಣಿಗತನ' ಅವಮಾನ ಸಂಗತಿ ಅಲ್ಲಿ ಅರ್ಧನಾರೀಶ್ವರ ಕಲ್ಪನೆ ಒಟ್ಟು ಜೀವನಕ್ರಮಕ್ಕೆ ಪ್ರತೀಕವಾಗಿದೆ. ಗಾಂಧೀಜಿಯವರಲ್ಲಿ ಇದನ್ನು ಗುರುತಿಸಬಹುದೆಂದು" ಉಲ್ಲೇಖಿಸಿದ್ದಾರೆ. ಇದು ಕನ್ನಡ ನವೋದಯ ಸಾಹಿತ್ಯವನ್ನು ಅರ್ಥ ಮಾಡಿಕೊಳ್ಳಲು ಹೀಗೆ ಹಿಂದೂ ರಾಷ್ಟ್ರವಾದಿಗಳ ನಾಡು ಮತ್ತು ಗಾಂಧೀ ನಾಡು ಎಂಬ ಎರಡು ರಾಷ್ಟ್ರ ಪರಿಕಲ್ಪನೆಗಳು ನಮ್ಮ ಸಹಾಯಕ್ಕೆ ನಿಲ್ಲುತ್ತವೆಂಬುದನ್ನು ನಾವಿಲ್ಲಿ ಅರಿಯಬಹುದು. ವಿಜಯನಗರದ ಅರಸರು, ಚಿತ್ರದುರ್ಗದ ಈ ಹಂತದಲ್ಲಿ ಪಾಳೇಗಾರರು, ಕಿತ್ತೂರು ಚೆನ್ನಮ್ಮ, ಸಂಗೊಳ್ಳಿ ರಾಯಣ್ಣ, ಸಿಂಧೂರ ಲಕ್ಷ್ಮಣ, ನಾನಾಸಾಹೇಬ ಇನ್ನು ಮೊದಲಾದವರ ಚರಿತ್ರೆಯು ನಾಡಿನ ಪುನರುಜ್ಜೀವನದ ದೃಷ್ಟಿಯಿಂದ ಐತಿಹಾಸಿಕ ಕೃತಿಗಳಿಗೆ ಪ್ರಮುಖ ಆಕರಗಳಾದವು. ಅಂತೆಯೆ ಈ ಕಾದಂಬರಿಗಳು ಅಭಿಮಾನ ಶೂನ್ಯರಾದ ಕನ್ನಡಿಗರಲ್ಲಿ ದೇಶಾಭಿಮಾನ, ಭಾಷಾಭಿಮಾನ ಪ್ರಚೋದಿಸಲು ತುಂಬ ಪ್ರಮುಖ ಪಾತ್ರವನ್ನು ವಹಿಸಿದವು. ಈ ಹಿನ್ನೆಲೆಯಲ್ಲಿ ಅ.ನ.ಕೃ., ತ.ರಾ.ಸು., ಗಳಗನಾಥ, ಬಿ. ವೆಂಕಟಾಚಾರ್ಯ, ಆಲೂರು ವೆಂಕಟರಾಯ, ದೇವುಡು ಇನ್ನೂ ಮೊದಲಾದವರು ಆರಂಭದಲ್ಲಿ ಐತಿಹಾಸಿಕ ಕೃತಿಗಳನ್ನು ರಚಿಸಿ ತುಂಬ ಗಮನಾರ್ಹತೆ ಪಡೆದುಕೊಂಡರು. ಎರಡನೆಯ ಹಂತದಲ್ಲಿ ಮಾಸ್ತಿಯವರು 'ಚೆನ್ನಬಸವನಾಯಕ' ಮತ್ತು ಚಿಕ್ಕವೀರ ರಾಜೇಂದ್ರ'

ಕಾದಂಬರಿಗಳನ್ನು ರಚಿಸಿ ಕೆಳದಿಯ ಹಾಗೂ ಕೊಡಗಿನ ಸಾಮಂತರಾಜ ಮನೆತನಗಳ ಅವನತಿಯ ಚಿತ್ರಣವನ್ನು ಕಟ್ಟಿಕೊಡುವರು. ದುರ್ಗದ ಪಾಳೇಗಾರರನ್ನು ಕುರಿತು ತ.ರಾ.ಸು. ಅವರು ವೈಭವೀಕರಿಸಿ ಬರೆದಂತೆ ಮಾಸ್ತಿ ಅವರು ಇಲ್ಲಿ ಬರೆಯುವುದಿಲ್ಲ. ಬದಲಾಗಿ ಈ ರಾಜವಂಶಗಳ ಅವನತಿಗೆ ಸಾಂಸ್ಕೃತಿಕವಾದ ಒಳಕಾರಣಗಳನ್ನು ಹುಡುಕಿ ತೆಗೆಯುತ್ತಾರೆ. ರಾಣಿ ವೀರಮ್ಮಾಜಿಯ ವ್ಯಭಿಚಾರ ಪ್ರವೃತ್ತಿ ಮತ್ತು ಚಿಕ್ಕವೀರರಾಜೇಂದ್ರನ ದಾಷ್ಟ್ರ ಹಾಗೂ ವಿಷಯ ಲಂಪಟತನಗಳೇ ಆಯಾ ರಾಜ್ಯಗಳ ಅವನತಿಗೆ ಮುಖ್ಯ ಕಾರಣ ಎನ್ನುವ ಧ್ವನಿ ಕಾದಂಬರಿಗಳಿಂದ ಮೂಡಿ ಬಂದಿರುವುದನ್ನು ಅರಿಯಬಹುದು. ಅಂತೆಯೇ ಈ ಹಿನ್ನೆಲೆಯಲ್ಲೇ ಬಂದ ಕೆ.ವಿ. ಅಯ್ಯರ್ ಅವರ “ಶಾಂತಲ’ ಮತ್ತು ರೂಪದರ್ಶಿ’, ದೇವುಡು ಅವರ ‘ಮಯೂರ’, ತ.ರಾ.ಸು ಅವರ ‘ಹಂಸಗೀತೆ’, ‘ದುರ್ಗಾಸ್ತಮಾನ’ ಇನ್ನೂ ಮುಂತಾದ ಪ್ರಮುಖ ಕೃತಿಗಳು ಐತಿಹಾಸಿಕ ದೃಷ್ಟಿಯಿಂದ ತುಂಬ ಮಹತ್ವದ ಕೃತಿಗಳೆಂದು ನಾವಿಲ್ಲಿ ಗುರುತಿಸಬಹುದು.

ಪುರಾಣವೂ ಸಹ ಚರಿತ್ರೆಯಂತೆ ಆಧುನಿಕ ಕನ್ನಡ ಸಾಹಿತ್ಯವನ್ನು ರೂಪಿಸಿದ ಪ್ರಮುಖ ಆಕರಗಳಲ್ಲೊಂದು. ಈ ದಿಸೆಯಲ್ಲಿ “ಪುರಾಣವನ್ನು ಮಡಕೆಯಂತೆ ಒಡೆದುಹಾಕುವ ಮತ್ತು ಲೋಹದಂತೆ ಕರಗಿಸಿ ತಮ್ಮ ಕಾಲದ ಸಂವೇದನಗೆ ತಕ್ಕ ಆಕರಗಳಲ್ಲಿ ಅಚ್ಚು ಹೊಯ್ಯುವ ಎರಡು ವಿಧಾನಗಳು ಕನ್ನಡದಲ್ಲಿವೆ. ಹಾಗೆಯೆ ವಾಸ್ತವದ ಕತೆಯನ್ನು ಪುರಾಣ ಲೋಕದಲ್ಲಿಟ್ಟು ನೋಡುವ ವಿಧಾನ” ಇದೆ. ಅಂದರೆ ಇದ್ದುದನ್ನು ಇದ್ದಂತೆಯೇ ನಡೆದುದನ್ನು ನಡೆದಂತೆಯೇ ಚಿತ್ರಿಸಲು ಪ್ರಯತ್ನಿಸುವುದು ಪ್ರತಿಕೃತಿ ವಿಧಾನವಾಗಿದೆ. ಇಂಥ ಪ್ರಯತ್ನಕ್ಕೆ ಹೋಗದೆ ಇದ್ದದ್ದೂ ನಡೆದದ್ದೂ ತಮಗೆ ಹೇಗೆ ಗೋಚರಿಸಿತೋ ಹಾಗೇ ತಮ್ಮ ಅನುಭವಕ್ಕೆ ಆಕಾರ ಕೊಡುವ ಬಗೆಯನ್ನು ಪ್ರತಿಮಾ ವಿಧಾನವೆಂದು ಕರೆಯುತ್ತೇವೆ. ಆದರೆ ಪ್ರತಿಮಾ ದೃಷ್ಟಿಗೆ ವಸ್ತುವಿಗಿಂತಲೂ ಆ ವಸ್ತು ಪ್ರಚೋದಿಸುವ ಅನುಭವವೇ ವಿಶೇಷವಾಗಿ ಮಾನ್ಯ ವಿಷಯವೆಂದು ಗುರುತಿಸಲಾಗುವುದು. ಈ ಅರ್ಥದಲ್ಲಿಯೇ ಪುರಾಣ ಪ್ರಪಂಚವೆಲ್ಲ ಪ್ರತಿಮಾ ಪ್ರಪಂಚವೇ ಎಂದು ಕುವೆಂಪು ಗುರುತಿಸಿರುವುದು ಗಮನಾರ್ಹ. ಇನ್ನೂ ಕೆಲವರು “ಪುರಾಣವೆಂದರೆ ಪುಣ್ಯ ಕಥೆಗಳೆಂದೂ’, ‘ಪುರಾಣವೆಂದರೆ ಅತ್ಯಂತವಾದ ಸಂಕೀರ್ಣವಾದ ಸಾಂಸ್ಕೃತಿಕ ಸತ್ಯ’ವೆಂದೂ, ಹಾಗೂ ‘ಸಾಹಿತ್ಯವೆಂದರೆ ಸ್ಥಳಾಂತರಗೊಂಡ ಪುರಾಣವೆಂದು’ ಉಲ್ಲೇಖಿಸುವರು. ಈ ಹಿನ್ನೆಲೆಯಲ್ಲಿ ಆಧುನಿಕ ಲೇಖಕನೊಬ್ಬ ಚರಿತ್ರೆ ಹಾಗೂ ಪುರಾಣಕ್ಕೆ ಹೋಗುವ ಕುತೂಹಲ ವಿಚಾರವು ಲೇಖಕನ ಒಲವು ನಿಲುವುಗಳನ್ನು ಸೂಚಿಸುತ್ತದೆಂದು ನಾವಿಲ್ಲಿ ಗಮನಿಸಬಹುದು.

ಈ ಸಂವೇದನೆಯ ಹಿನ್ನೆಲೆಯಲ್ಲಿ ಪು.ತಿ. ನರಸಿಂಹಾಚಾರ್ಯ, ಜಿ.ಎಸ್. ಶಿವರುದ್ರಪ್ಪ, ಸು.ರಂ. ಎಕ್ಕುಂಡಿ ಇನ್ನು ಮೊದಲಾದವರು ತಮ್ಮ ಕಾವ್ಯಗಳಲ್ಲಿ ಪೌರಾಣಿಕ ಪ್ರಜ್ಞಾ ಪ್ರವಾಹವನ್ನು ಗುರುತಿಸಿದರೆ, ಕುವೆಂಪು ಅವರು ಲೋಕದ ಗಂಡು – ಹೆಣ್ಣುಗಳ ಪ್ರಣಯ ಪ್ರೇಮಗಳನ್ನು

ರಾಧಾ ಮಾಧವ ವಿನೋದ ಹಾಸದಲ್ಲಿ ಶಿವಶಕ್ತಿಯರ ಪ್ರೇಮ ವಿಲಾಸದಲ್ಲಿ ಅಭಿನ್ನಗೊಳಿಸಿ 'ಪ್ರೇಮ ಕಾಶ್ಮೀರ'ವನ್ನು ರಚಿಸಿ ತೋರಿಸುವರು. ಆದರೆ ಅವರ 'ಶ್ರೀ ರಾಮಾಯಣ ದರ್ಶನಂ' ಕೃತಿ ಪೌರಾಣಿಕ ಪ್ರಪಂಚ ಮಾನವ ಲೋಕಕ್ಕೆ ಹಿಡಿದ ಮಹಾಪ್ರತಿಮೆಯಂತೆ ಗಮನಾರ್ಹತೆ ಪಡೆದುಕೊಂಡ ಬೃಹತ್ ಕಾವ್ಯವಾಗಿದೆ. ಹಾಗೆಯೆ ಅವರ 'ಅನಿಕೇತನ' ಮತ್ತು ಗೋಪಾಲಕೃಷ್ಣ ಅಡಿಗರ 'ಮೋಹನ ಮುರಳಿ' ಕವಿತೆಗಳು ಪುರಾಣ ಪ್ರಜ್ಞೆಯನ್ನು ಮೀರಿದ ಕಲಾಕೃತಿಗಳಾಗಿ ಗಮನಾರ್ಹತೆ ಪಡೆದುಕೊಂಡಿವೆ.

ಅಂತೆಯೆ ಕಾದಂಬರಿ ಸಾಹಿತ್ಯ ಕ್ಷೇತ್ರದಲ್ಲೂ ವಾಸ್ತವದ ಕಥೆಯನ್ನು ಪುರಾಣ ಲೋಕದಲ್ಲಿಟ್ಟು ನೋಡುವ ವಿಧಾನವು ಹೊಸ ಬಗೆಯಾಗಿದ್ದು. ಈ ಹಿನ್ನೆಲೆಯಲ್ಲಿ ಶಿವರಾಮಕಾರಂತರ 'ದೇವದೂತರು' ಮತ್ತು ಕುವೆಂಪು ಅವರ 'ಧನ್ವಂತರಿ ಚಿಕಿತ್ಸೆ' ಮಾಸ್ತಿಯವರ ಸಮಗ್ರ ಕತೆಗಳು, ಬೀಳವಾರರ 'ಆಕಾಶಕ್ಕೆ ನೀಲಿ ಪರದೆ', 'ಶ್ರೀರಂಗರ 'ವಿಶ್ವಾಮಿತ್ರ ಸೃಷ್ಟಿ' ಇನ್ನು ಮೊದಲಾದವು ಈ ತಂತ್ರವನ್ನು ಬಳಸಿ ಸಶಕ್ತವಾಗಿ ಮೂಡಿ ಬಂದಿರುವ ಪ್ರಮುಖ ಕೃತಿಗಳಾಗಿವೆ. ಇನ್ನು ನಾಟಕ ಸಾಹಿತ್ಯ, ಜನಪದ ರಂಗಭೂಮಿ ಮತ್ತು ವೃತ್ತಿರಂಗಭೂಮಿಗಳಿಗೆ ಬಂದರೆ, ಪೌರಾಣಿಕ ಪ್ರಪಂಚವು ಎಂದೂ ಮುಗಿಯದ ಸಮೃದ್ಧ ಗಣಿ ಇದ್ದಂತೆ. ಈ ನಿಟ್ಟಿನಲ್ಲಿ ಬಂದ ವಿ.ಸೀ. ಅವರ 'ಆಗ್ರಹ', ಕುವೆಂಪು ಅವರ 'ಶೂದ್ರತಪಸ್ವಿ', 'ಸ್ಮಶಾನಕುರುಕ್ಷೇತ್ರ', ಮಾಸ್ತಿಯವರ 'ಯಮನಸೋಲು', 'ಯಶೋಧರ', ಪು.ತಿ.ನ. ಅವರ 'ಅಹಲ್ಯೆ' ಇನ್ನು ಮುಂತಾದವು ಗಮನಾರ್ಹತೆ ಪಡೆದುಕೊಂಡ ಕೆಲವು ಪ್ರಮುಖ ನಾಟಕಗಳಾಗಿವೆ.

ಹೀಗೆ ಚರಿತ್ರೆ ಮತ್ತು ಪುರಾಣಗಳ ಸಂವೇದನೆಯ ಹಿನ್ನೆಲೆಯಲ್ಲಿ ಸೃಜನಶೀಲ ಕೃತಿಗಳನ್ನು ರಚಿಸುವ ಮೂಲಕ ರಾಷ್ಟ್ರೀಯ ಪ್ರಜ್ಞೆ ಮತ್ತು ನಾಡು – ನುಡಿಯ ಪ್ರೀತಿ, ಸ್ವಾತಂತ್ರ್ಯ, ಸಮಾನತೆ, ನಿರಪೇಕ್ಷ ಧರ್ಮ, ಅದಮ್ಯ ಮಾನವೀಯತೆ, ಜಾತ್ಯಾತೀತತೆಯ ಮನೋಧರ್ಮ ಇನ್ನು ಮುಂತಾದ ಮಹತ್ವದ ಮೌಲ್ಯಗಳನ್ನು ಕಟ್ಟಿಕೊಡುವ ದಿಟ್ಟ ಪ್ರಯತ್ನ ಮಾಡಿವೆ.

**೩.೪.ಸೈದ್ಧಾಂತಿಕ ಮತ್ತು ಆಧ್ಯಾತ್ಮಿಕ ಚಿಂತಕರ ಪ್ರಭಾವದ ವಿಚಾರಗಳು :**

ಆಧುನಿಕ ಕನ್ನಡ ಸಾಹಿತ್ಯವನ್ನು ರೂಪಿಸುವಲ್ಲಿ ಸೈದ್ಧಾಂತಿಕ ಚಿಂತಕರ ಪಾತ್ರವು ಕೂಡ ತುಂಬಾ ಪ್ರಮುಖವಾಗಿದ್ದು, ಅವರಲ್ಲಿ ರಾಜರಾಮಮೋಹರಾಯ (೧೭೭೨–೧೮೩೩), ದಯಾನಂದ ಸರಸ್ವತಿ, ಅನಿಬೆಸೆಂಟ್ (೧೮೪೭–೧೯೩೩), ಸ್ವಾಮಿ ವಿವೇಕಾನಂದ (೧೮೮೩), ಆತ್ಮರಾಮಪಾಂಡುರಂಗ ಇನ್ನು ಮುಂತಾದವರ ಹೆಸರು ಇಲ್ಲಿ ತುಂಬ ಪ್ರಮುಖವಾಗಿವೆ.

ರಾಜರಾಮಮೋಹನರಾಯರು ಹುಟ್ಟಿದ್ದು ಬಂಗಾಳಿಯಾದರೂ ಅವರ ಪ್ರಭಾವವು ಇಡೀ ಭಾರತದ ಮೇಲೆ ತೀವ್ರತರವಾಗಿತ್ತು . ಈ ದೃಷ್ಟಿಯಿಂದ ಅವರನ್ನು 'ಆಧುನಿಕ ಭಾರತದ ನಿರ್ಮಾಪಕ'ರೆಂದು ಗುರುತಿಸಲಾಗುವುದು. ಅವರು ಚಿಕ್ಕ ವಯಸ್ಸಿನಲ್ಲೇ ತಂದೆ – ತಾಯಿಗಳಿಬ್ಬರನ್ನೂ ಕಳೆದುಕೊಂಡು, ಅವರ ಬುದ್ಧಿಯು ವಿವಿಧ ಧರ್ಮಗ್ರಂಥಗಳು ಮತ್ತು ದೇಶದ ವಿವಿಧ ನೆಲೆಗಳ ಸುತ್ತಾಟದ ಕಡೆ ಹರಿಯಿತು. ಈ ಮೂಲಕ ಅವರು ಸ್ವಂತ ವಿಚಾರ ಶಕ್ತಿ, ತಾರ್ಕಿಕ ಬುದ್ಧಿಯನ್ನು ರೂಪಿಸಿಕೊಂಡರು. ಅಂತೆಯೆ ಎಲ್ಲ ಮತಗಳ ವಿಚಾರವನ್ನು ಬಹು ಸೂಕ್ಷ್ಮವಾಗಿ ಅಧ್ಯಯನ ಮಾಡಿ ವಿಶ್ಲೇಷಣೆ ಮಾಡುವ ಸಾಮರ್ಥ್ಯವನ್ನೂ ಬೆಳೆಸಿಕೊಂಡರು. ಅಷ್ಟೇ ಅಲ್ಲದೆ ಅವರು ತಮ್ಮ ದೈತ್ಯ ಓದು, ಪ್ರತಿಭೆಯ ಪರಿಶ್ರಮದಿಂದ ಆಗಿನ ಬ್ರಿಟಿಷರಿಂದ ಆಕರ್ಷಿತರಾಗಿ ಈಸ್ಟ್ ಇಂಡಿಯಾ ಕಂಪನಿಯ ಪ್ರಮುಖ ಹುದ್ದೆಯೊಂದನ್ನು ಕೂಡಾ ಪಡೆದುಕೊಂಡಿದ್ದರು. ಇದರಿಂದ ಅವರಿಗೆ ಪಶ್ಚಿಮದ ಸಂಸ್ಕೃತಿ, ಧರ್ಮ, ಸಾಮಾಜಿಕ ಹಾಗೂ ರಾಜಕೀಯ ಅರಿವು ಅಯಾಚಿತವಾಗಿ ಬಂದಿತು. ಈ ನಡುವೆ ೧೮೨೩ರಲ್ಲಿ ಸತಿಸಹಗಮನ ಪದ್ಧತಿಯಿಂದ ಬಂಗಾಳ ಒಂದರಲ್ಲೇ ನೂರಾರು ಸ್ತ್ರೀಯರನ್ನು ಬಲವಂತದಿಂದ ಸುಟ್ಟಿದ್ದು ಅವರ ಮನಸ್ಸನ್ನು ತುಂಬಾ ನೋವುಂಟು ಮಾಡಿತು. ಇಂಥ ಅನಿಷ್ಟ ಕಂದಾಚಾರ ಬದುಕನ್ನು ನಿರ್ಮೂಲನ ಮಾಡುವ ಬಗ್ಗೆ ಅವರು ಪಣ ತೊಟ್ಟರು. ಇದರ ಪರಿಣಾಮದ ಫಲ ಅವರು 'ಬ್ರಹ್ಮ ಸಮಾಜ' (೧೮೨೮)ವನ್ನು ಸ್ಥಾಪಿಸಿದರು. ಈ ಹಿನ್ನೆಲೆಯಲ್ಲಿ ಅವರು ಆವರೆಗೆ ಇದ್ದ ಅನಿಷ್ಟ ಬಾಲ್ಯವಿವಾಹ, ಸತಿ ಸಹಗಮನ, ಸ್ತ್ರೀಯರನ್ನು ಬಂಧಿಸುವ ಅನೇಕ ಕೆಟ್ಟ ತರದ ಮೌಢ್ಯ ಪದ್ಧತಿಗಳನ್ನು ಅವರು ಕೊನೆಗಾಣಿಸಲು ಪ್ರಯತ್ನಿಸಿ ಸಫಲರಾದರು. ಈ ಮೂಲಕ ಅವರು ಸ್ತ್ರೀಯರಿಗೆ ಬದುಕುವ ಸ್ಥೈರ್ಯ, ಧೈರ್ಯ, ಶಿಕ್ಷಣ, ಸ್ವಾತಂತ್ರ್ಯ, ಸಮಾನತೆಯನ್ನು ಒದಗಿಸಿದರು. ಈ ಎಲ್ಲದರ ದಟ್ಟ ಸಂವೇದನೆಯು ಅಂದಿನ ಆಧುನಿಕ ಕನ್ನಡ ಕಾದಂಬರಿ ಸಾಹಿತ್ಯವನ್ನು ರೂಫಿಸುವಲ್ಲಿ ತುಂಬ ಮಹತ್ತರ ಪಾತ್ರವನ್ನು ವಹಿಸಿವೆ ಎಂಬುದು ಗಮನಾರ್ಹ. ಇದನ್ನು ಅಂದಿನ ಕನ್ನಡದ ಬಿ. ವೆಂಕಟಾಚಾರ್ಯರು ಬಂಗಾಳಿಯ ಭಾಷೆ, ಸಂಸ್ಕೃತಿ ಗೊತ್ತಿಲ್ಲದಿದ್ದರೂ ಅಂದಿನ ಬಂಗಾಳಿಯ ದಿನಪತ್ರಿಕೆಯನ್ನು ಕಷ್ಟಪಟ್ಟು ಓದಿ ಕಲಿತು ಪ್ರಭಾವಿತರಾಗುವ ಮೂಲಕ, ಅಂದಿನ ಬಂಗಾಳಿಯ ಶ್ರೇಷ್ಠ ಕಾದಂಬರಿಕಾರರಾದ ಬಂಕಿಮಚಂದ್ರರ ಪ್ರತಿಷ್ಠಿತ ಕಾದಂಬರಿಗಳನ್ನು ಅನುವಾದದ ಮೂಲಕ ಕನ್ನಡಕ್ಕೆ ತಂದುಕೊಟ್ಟರು. ಅಲ್ಲದೆ ಬಿ. ವೆಂಕಟಾಚಾರ್ಯರಿಗೆ ನೇರವಾಗಿ ಈ ಪಶ್ಚಿಮದ ಪ್ರಭಾವವಿಲ್ಲದಿದ್ದರೂ ಬಂಕಿಮಚಂದ್ರರ ಬರವಣಿಗೆಯಿಂದ ಕನ್ನಡಕ್ಕೂ ಅದು ಆಯಾಚಿತವಾಗಿ ಬಂದಿತೆಂಬುದು ಗಮನಾರ್ಹ. ಹಾಗೆಯೆ ಈ ಮೂಲಕ ಕನ್ನಡ ಕಾದಂಬರಿ ಸಾಹಿತ್ಯ ಪ್ರಕಾರವು ಮೊತ್ತ ಮೊದಲು ಕಾಲಿರಿಸಿತು. ಅನಂತರ ಗಳಗನಾಥ, ಎಂ.ಎಸ್. ಪುಟ್ಟಣ್ಣ, ಕೆರೂರು ವಾಸುದೇವಾಚಾರ್ಯ, ಗುಲ್ವಾಡಿ ವೆಂಕಟರಾವ್

ಅವರು ಕಾದಂಬರಿ ಸಾಹಿತ್ಯ ಪ್ರಕಾರವು ಗಟ್ಟಿಯಾಗಿ ನೆಲೆಯೂರಲು ತುಂಬ ಮಹತ್ತರ ಪಾತ್ರವಹಿಸಿದರೆಂದು ಗುರುತಿಸಬಹುದು. ಬಿ.ವೆಂಕಟಾಚಾರ್ಯರು ಬಂಗಾಳಿಯಿಂದ ಕನ್ನಡಕ್ಕೆ ಅನುವಾದಿಸಿದ 'ಆನಂದಮಠ', 'ದುರ್ಗೇಶ ನಂದಿನಿ' ಇನ್ನು ಮೊದಲಾದ ಗಮನಾರ್ಹ ಕೃತಿಗಳಾಗಿದ್ದು, ಅಂದಿನ ಪುರುಷ ಸಮಾಜದಲ್ಲಿ ಸ್ತ್ರೀಯರಿಗೆ ಸಿಗಬೇಕಾದ ಶಿಕ್ಷಣ, ಸ್ವಾತಂತ್ರ್ಯ, ವೃತ್ತಿ ಇನ್ನು ಮುಂತಾದ ಅಂಶಗಳ ಬಗ್ಗೆ ಪ್ರಜ್ಞೆಯನ್ನುಂಟು ಮಾಡಿದರು. ಅಂತೆಯೆ ಇದರಿಂದ ಒಂದು ಆಧುನಿಕ ಸಮಾಜ ಸಂರಚನೆಯ ಮೂಲ ರೂಪರೇಷೆಗಳು ಬಲವಾಗಿ ಸಿಕ್ಕಿತೆಂದರೆ ತಪ್ಪಾಗಲಾರದು. ಅನಂತರ, ಈ ಪರಂಪರೆಯ ಹಿನ್ನೆಲೆಯಲ್ಲೇ ಬಂದ ಇಂದಿರಾ, ಇಂದಿರಾಬಾಯಿ, ವಾಗ್ದೇವಿ ಇನ್ನು ಕನ್ನಡದ ಸ್ವತಂತ್ರ ಶ್ರೇಷ್ಠ ಕಾದಂಬರಿಗಳು ರೂಪುಗೊಳ್ಳಲು ಸಾಧ್ಯವಾಯಿತೆಂದು ನಾವಿಂದು ಅರಿಯಬಹುದು.

ಹಾಗೆಯೇ ಇದೇ ಹೊತ್ತಿನಲ್ಲಿ ಹೊಸಗನ್ನಡದ ಕೆಲವೇ ಅವಿಸ್ಮರಣೀಯ ಪ್ರಮುಖ ಕಾದಂಬರಿಕಾರರಲ್ಲೊಬ್ಬರಾದ ಗಳಗನಾಥರು (೧೮೬೯-೧೯೪೨) ಕೂಡ ಬಿ. ವೆಂಕಟಾಚಾರ್ಯರ ಸಮಕಾಲೀನರಾಗಿಯೇ ಇದ್ದು, ಮರಾಠಿಯ ಪ್ರಸಿದ್ಧ ಕಾದಂಬರಿಕಾರರಾದ ಹರಿನಾರಾಯಣ ಅಪ್ಪೆಯವರ ಕಾದಂಬರಿಗಳನ್ನೆಲ್ಲ ಕನ್ನಡಕ್ಕೆ ಅನುವಾದಿಸಿ, ತುಂಬ ಗಮನಾರ್ಹತೆ ಪಡೆದುಕೊಂಡರು. ಹರಿನಾರಾಯಣ ಅಪ್ಪೆಯವರ 'ಗಡ ಆಲಾ ಪಣ ಸಿಂಹಗೇಲ' (ಕೋಟೆ ದೊರಕಿತು ಆದರೆ ಸಿಂಹ ಹೋಯಿತು)ವನ್ನು ಕನ್ನಡಾನುವಾದಕ್ಕೆ 'ಕಮಲಕುಮಾರಿ' ಎಂದು ಹೆಸರಿಟ್ಟ ಮೊದಲು ಪ್ರಕಟಿಸಿದರು. ಅನಂತರ 'ಪ್ರಬುದ್ಧ ಪದ್ಮನಮನೆ', 'ಸುದ್ಬೋದ ಚಂದ್ರಿಕೆ', 'ಮಾಧವಕರುಣವಿಲಾಸ' ಇನ್ನೂ ಮೊದಲಾದ ಶ್ರೇಷ್ಠ ೩೩ ಕಾದಂಬರಿಗಳನ್ನು ಕನ್ನಡಕ್ಕೆ ಕೊಟ್ಟು, ಕನ್ನಡದ ಒಬ್ಬ ಮೊದಲ ಶ್ರೇಷ್ಠ ಕಾದಂಬರಿಕಾರರಾಗಿ ತುಂಬ ಗಮನಾರ್ಹತೆ ಪಡೆದುಕೊಂಡರು.

ದಯಾನಂದ ಸರಸ್ವತಿ (೧೮೨೪-೧೮೮೩) ಅವರು ಕೂಡ ರಾಜಾರಾಮ ಮೋಹನರಾಯರ ಸಮಕಾಲೀನರು. ಇವರು ಸಹ ರಾಯರಂತೆ ಬ್ರಹ್ಮಚಾರಿಯಾಗಿ ಬದುಕಿ, ಬ್ರಹ್ಮಾನಂದ ಮತ್ತು ಪರಮಹಂಸರಿಂದ ಪ್ರಭಾವಿತರಾಗಿ ಅಧ್ಯಾತ್ಮವನ್ನು ಅವಲಂಬಿಸಿದರು. ಅನಂತರ ಪ್ರಾಚೀನ ಭಾರತೀಯ ಸಂಸ್ಕೃತಿಯ ಭವ್ಯತೆಯನ್ನು ಪುನಶ್ಚೇತನಗೊಳಿಸುವ ಧ್ಯೇಯವನ್ನು ನಂಬಿದರು. ಆ ಚಳುವಳಿಯ ನಿಮಿತ್ತ 'ಆರ್ಯ ಸಮಾಜ' (೧೮೭೫)ವನ್ನು ಸ್ಥಾಪಿಸಿದರು. ಆ ಮೂಲಕ ಅಸ್ಪೃಶ್ಯತೆ, ಬಾಲ್ಯವಿವಾಹ ಮತ್ತು ಅನಕ್ಷರತೆ ನಿರ್ಮೂಲನ ಮತ್ತು ವಿಧವಾ ವಿವಾಹಕ್ಕೆ ಅವಕಾಶ ಕಲ್ಪಿಸಿ ಸಮಾಜದ ಹುಳುಕುಗಳ ನಿವಾರಣೆಗೆ ಸಾಕಷ್ಟು ಶ್ರಮಿಸಿದರು. ಇವರ ದಟ್ಟ ಪ್ರಭಾವವು ನವೋದಯ ಸಾಹಿತ್ಯದ ಏಲೆ ಸಾಕಷ್ಟು ಆಗಿದ್ದು, ಈ ಹಿನ್ನೆಲೆಯಲ್ಲಿ ಬಿ.ವೆಂಕಟಾಚಾರ್ಯ, ಗಳಗನಾಥ,

ಬಾಬುರಾವ್, ಎಂ.ಎಸ್. ಪುಟ್ಟಣ್ಣ, ಕುವೆಂಪು ಇನ್ನು ಮುಂತಾದವರು ಪ್ರಮುಖ ಕೃತಿಗಳಲ್ಲಿ ಅವರ ದಟ್ಟ ಛಾಯೆ ಇರುವುದನ್ನು ನಾವು ಮರೆಯುವಂತಿಲ್ಲ.

ಶ್ರೀ ರಾಮಕೃಷ್ಣ ಪರಮಹಂಸರ (೧೮೩೬-೧೮೮೬) ಇವರೆಲ್ಲರಿಗಿಂತ ಭಿನ್ನವಾಗಿ ನಿಂತಿಕೊಳ್ಳುವ ಆಧ್ಯಾತ್ಮಿಕ ಸಾಧಕರು. ಇವರ ಧಾರ್ಮಿಕ ಜಾಗೃತಿಯಿಂದಾಗಿ ಹಿಂದೂ, ಮುಸ್ಲಿಂ, ಬ್ರಹ್ಮ ಸಮಾಜ ಎಂಬ ಪ್ರಭೇದಗಳು ಕಡಿಮೆಯಾದವು. ಅವರು ಎಲ್ಲ ಧರ್ಮಗಳಲ್ಲಿ ನಂಬಿರುವ ದೈವನು ಒಬ್ಬನೆ ಎಂಬುದನ್ನು ತಮ್ಮ ದೈವಸಾಕ್ಷಾತ್ಕಾರಗಳಿಂದ ಪ್ರತಿಪಾದಿಸಿದವರು. ಅನಂತರ ಅವರು ಸರಳ ಪ್ರವಚನಗಳ ಮೂಲಕ ಸರ್ವಧರ್ಮಗಳ ಸಮನ್ವಯ ಸಾಧಿಸಿದರು. ಅವರ ದಟ್ಟ ಪ್ರಭಾವವನ್ನು ಆಧುನಿಕ ಕನ್ನಡ ಸಾಹಿತ್ಯದ ಕುವೆಂಪು, ಬೇಂದ್ರೆ, ಮಾಸ್ತಿ ಇನ್ನು ಮುಂತಾದವರ ಪ್ರಮುಖ ಕವಿಗಳ ಕೃತಿಗಳಲ್ಲಿ ನಾವು ಕಾಣಬಹುದು". ಉದಾ: "ಮತದಿಂದ ಪಾರಾಗುವ ಆಧ್ಯಾತ್ಮಕ್ಕೆ ಶರಣಾಗು" ಎಂಬುದು ಕುವೆಂಪು ಅವರ ಅಭಿಪ್ಸೆ ಆಗಿದ್ದು, ಬಿಡಿ ಕವನ, ಕಥೆ, ಕಾದಂಬರಿ ಇನ್ನು ಮೊದಲಾದ ಅವರ ಕೃತಿಗಳಲ್ಲಿ ಈ ಅಂಶ ಅಂತರ್ಗತವಾಗಿ ಇರುವುದನ್ನು ನಾವು ಗ್ರಹಿಸಬಹುದು.

ಸ್ವಾಮಿ ವಿವೇಕಾನಂದರು (೧೮೬೩) ಶ್ರೀ ರಾಮಕೃಷ್ಣ ಪರಮಹಂಸರ ಪರಮ ಶಿಷ್ಯರು. ಇವರು ಬಂಗಾಳಿಯಲ್ಲಿ ಹುಟ್ಟಿ ಬೆಲೆದರೂ ದೇಶದಾದ್ಯಂತ ಸುತ್ತಾಡಿ, ಆಧ್ಯಾತ್ಮಿಕತೆ, ವೈಚಾರಿಕತೆಯ ಮುದ್ರೆಯನ್ನೊತ್ತಿದ್ದ ಆಧುನಿಕ ಭಾರತದ ನವ ನಿರ್ಮಾಪಕರಾಗಿದ್ದು, "ದೇವರಿದ್ದಾನೆಯೇ? ಇದ್ದರೆ ಅವನನ್ನು ಕಾಣುವುದು ಸಾಧ್ಯವೇ?" ದೇವರಿಗಾಗಿ ಹಂಬಲಿಸುವವರಿದ್ದಾರೆಯೆ? ಹೆಣ್ಣು, ಮಣ್ಣು, ಹೊನ್ನುಗಾಗಿ ಜೀವನವಿಡೀ ಚಿಂತಿಸುತ್ತಾರೆ. ದೇವರಿಗಾಗಿ ಒಮ್ಮೆಯಾದರೂ ಚಿತ್ತಾಗ್ರಸ್ತವಾಗಿ ಚಿಂತಿಸುವವರಿದ್ದಾರೆಯೆ? ಆ ಬಯಕೆ ಇದ್ದಲ್ಲಿ, ಅವನಿಗಾಗಿ ಹಂಬಲಿಸಿದ್ದಲ್ಲಿ ದೇವರು ಕಂಡೇ ಕಾಣುತ್ತೇನೆ? ಎಂಬ ಪರಮಹಂಸರ ನಂಬಿಕೆಯಲ್ಲಿ ಗಾಢಶ್ರದ್ಧೆಯನ್ನಿಟ್ಟುಕೊಂಡಿದ್ದವರು. ಇವರ ನಿರಪೇಕ್ಷ ಧರ್ಮ, ಸ್ತ್ರೀಯ ಸ್ಥಾನಮಾನ, ಜಾತಿ ವಿರೋಧ, ರಾಷ್ಟ್ರಭಕ್ತಿ, ರಾಷ್ಟ್ರೀಯತೆ, ಸ್ವಾತಂತ್ರ್ಯ, ಸರ್ವಧರ್ಮ ಸಮನ್ವಯ, ಸಮಷ್ಠಿಯ ಪ್ರಜ್ಞೆ, ಅದಮ್ಯ ಮಾನವೀಯ ಪ್ರೇಮ, ಇನ್ನೂ ಮುಂತಾದ ಶ್ರೇಷ್ಠ ಮೌಲಿಕ ಚಿಂತನೆಯನ್ನು ಭಾರತದಾದ್ಯಂತ ಬಿತ್ತಿದರು. ಇವರ ದಟ್ಟ ಪ್ರಭಾವವನ್ನು ಕುವೆಂಪು, ಬೇಂದ್ರೆ, ಜಿ.ಎಸ್. ಶಿವರುದ್ರಪ್ಪ, ಕಣವಿ ಇನ್ನೂ ಮುಂತಾದ ಶ್ರೇಷ್ಠ ಕವಿಗಳ ಕಾವ್ಯ, ಕಾದಂಬರಿ, ಕಥೆ, ವಿಚಾರ-ವಿಮರ್ಶೆಗಳಲ್ಲಿ ನಾವು ಕಾಣಬಹುದು.

ಹೀಗೆ ಇನ್ನು ಮೊದಲಾದ ಸೈದ್ಧಾಂತಿಕ ಮತ್ತು ಆಧ್ಯಾತ್ಮಿಕ ಚಿಂತಕರ ಪ್ರೇರಣೆ ಪ್ರಭಾವವು ನವೋದಯ ಸಾಹಿತ್ಯವನ್ನು ರೂಪಿಸುವಲ್ಲಿ ತುಂಬ ಮಹತ್ತರ ಪಾತ್ರವನ್ನು ವಹಿಸುವ ಮೂಲಕ ಮೌಲಿಕ ಚಿಂತನೆಯನ್ನು ಬೆಳೆಸಿದರೆಂಬುದು ಸರ್ವಸಮ್ಮತವಾದ ವಿಷಯ.

**೩.೫ ಪ್ರಕೃತಿಯ ಪ್ರೀತಿ ಕುರಿತ ವಿಚಾರಗಳು :**

ಆಧುನಿಕ ಕನ್ನಡ ನವೋದಯ ಸಾಹಿತ್ಯವನ್ನು ರೂಪಿಸಿದ ಪ್ರಮುಖ ಆಕಾರಗಳಲ್ಲಿ ಪ್ರಕೃತಿಯೂ ಒಂದು. ಈ "ಮನುಷ್ಯಾಕೃತವಲ್ಲದ ಹೊರ ಜಗತ್ತನ್ನು ಪ್ರಕೃತಿ" ಎಂದು ಗುರುತಿಸಲಾಗುತ್ತದೆ. ಅಂತೆಯೆ "ಮನುಷ್ಯನೂ ಭೂಮಿಯು ಮೇಲೆ ಕಾಣಿಸಿಕೊಳ್ಳುವುದಕ್ಕೆ ಮೊದಲಿನಿಂದಲೂ ಇರುವ, ಪ್ರಾಯಶಃ ಮನುಷ್ಯನು ಮಾಯವಾದ ಮೇಲೂ ಉಳಿಯುವ ಪ್ರಕೃತಿ ಆತನ ಬದುಕಿನ ಸಮಗ್ರ ಸ್ವರೂಪವನ್ನೇ ನಿರ್ಧರಿಸುವ ಸಂಗತಿಗಳಲ್ಲಿ ಒಂದು. ಈ ನಿಸರ್ಗದ ಬದಲಾವಣೆಯೊಂದಿಗೆ ಮನುಷ್ಯನಲ್ಲಿಯೂ ಬದಲಾವಣೆ ಉಂಟಾಗಿದೆ ಅಥವಾ ಮನುಷ್ಯ ಮತ್ತು ಮನುಷ್ಯರ ಅನನ್ಯತೆ ಪರಸ್ಪರ ಸಂಬಂಧಾತ್ಮಕವಾದುದು. ಒಂದು ಕಾಲಕ್ಕೆ ಪ್ರಕೃತಿ ಮತ್ತು ಮನುಷ್ಯ ಬೇರೆ ಬೇರೆಯಲ್ಲ. ಆತನೆ ಪ್ರಕೃತಿಯೂ ಆಗಿದ್ದನು. ಹೀಗೆ ಪರಸ್ಪರ ಬೆರೆತ ಸ್ಥಿತಿಯಿಂದ ಮನುಷ್ಯ ನಿಸರ್ಗದಿಂದದ ದೂರವಾಗುತ್ತ ಹೋಗುವುದನ್ನೇ ಸ್ಥಿತ್ಯಂತರ ಎಂದು ಕರೆಯಬಹುದು.

ಹೀಗೆ ಕ್ರಮೇಣ ಮನುಷ್ಯನು ನಿಸರ್ಗದಿಂದ ದೂರವಾದ ಕೂಡಲೇ ಅವನಲ್ಲಿದ್ದ ನಾಗರಿಕ ಪ್ರಜ್ಞೆ ಜಾಗೃತವಾಗಿ ನಿಸರ್ಗವನ್ನು ತನ್ನ ಸುಖ ಸಂತೋಷಕ್ಕಿರುವ ಆಸ್ತಿ ಎಂದು ಭಾವಿಸತೊಡಗಿದನು. ಹೀಗಾಗಿ ಇದೊಂದು ವ್ಯಾಪರೀಕರಣ ಮನೋಭಾವವಾಗಿ ನಿಸರ್ಗವನ್ನು ನೋಡುವ ಬಗೆ ಬದಲಾವಣೆ ಪಡೆದುಕೊಂಡಿತು. ಆದುದರಿಂದಲೇ ಈ "ಪ್ರಕೃತಿಯನ್ನು ಸಚೇತನವೆಂದು ತಿಳಿದು ಅದನ್ನು ವೇದ ಕಾಲದಷ್ಟು ಹಿಂದಿನಿಂದಲೇ ಆರಾಧಿಸುತ್ತಿದ್ದ ನಮ್ಮ ಹಿರಿಯರ ದೃಷ್ಟಿಕೋನವು" ಆಗಿತ್ತೆಂಬುದು ನಾವಿಂದು ತಿಳಿಯಬಹುದಾಗಿದೆ. ಒಟ್ಟಿನಲ್ಲಿ ಈ ಸಂವೇದನೆಯು ಪ್ರಾಚೀನ ಕಾಲದ ಸಾಹಿತ್ಯದಿಂದ ಇವತ್ತಿನವರೆಗೂ ಪ್ರಕೃತಿಯು ಒಂದಲ್ಲ ಒಂದು ಬಗೆಯಿಂದ ಪ್ರೇರಣೆ ನೀಡುತ್ತಾ ಸಾಹಿತ್ಯವನ್ನು ರೂಪಿಸುತ್ತಾ ಬಂದಿರುವುದನ್ನು ನಾವು ಮರೆಯುವಂತಿಲ್ಲ. ಅಂದರೆ ಇದು, ಕನ್ನಡ ಪ್ರಾಚೀನ ಸಾಹಿತ್ಯದಲ್ಲಿ ಒಂದು ಅಲಂಕಾರ ಸಾಮಗ್ರಿಯಾಗಿ ಬರುತ್ತಿತ್ತು. ಅಂತೆಯೆ ಅದು ಪ್ರಭುತ್ವವನ್ನು ಕೀರ್ತಿಸುವ, ಅವನ ಸಂಪತ್ತನ್ನು ಹೆಚ್ಚಿಸುವ ಪ್ರತಿಷ್ಠೆಯ ಸ್ಥಾನವಾಗಿತ್ತು. ಅನಂತರ ನಡುಗನ್ನಡದಲ್ಲಿ ದೇವರನ್ನು ಒಲಿಸಿಕೊಳ್ಳಲು ಇರುವ ಸಾಧನಗಳಲ್ಲಿ ಒಂದು ಉಪಕರಣವಾಗಿತ್ತು. ಆದರೆ ನವೋದಯದ ಕವಿಗಳಲ್ಲಿ ಸಮಾಜದ ಬಹುಮುಖೀಯ ಪ್ರೇರಣೆಯಾಗಿದ್ದು ಅಭಿವ್ಯಕ್ತಿಯನ್ನು ಪಡೆದುಕೊಂಡಿತು. ಅಂತೆಯೆ, "ಮಾನವನ ಮನಸ್ಸು ಮತ್ತು ನಿಸರ್ಗವು ಮೊದಲ ಬಾರಿಗೆ ಕನ್ನಡದಲ್ಲಿ ಮುಖಾಮುಖಿಯಾಗಿದ್ದು, ಪ್ರಕೃತಿ ಎನ್ನುವುದು ಶುದ್ಧ ಐಂದ್ರಿಕ ಅನುಭವ ಹಾಗೂ ತಾತ್ವಿಕ ಶೋಧನೆ ಎರಡಕ್ಕೂ ಅದ್ಭುತವಾದ ಮಾಧ್ಯಮವಾಯಿತು" ಗಮನಾರ್ಹತೆ ಪಡೆದುಕೊಂಡಿತು. ಅಂದರೆ ಈ ಹಿನ್ನೆಲೆಯಲ್ಲಿ ಪರಿಸರದ

ಕರಾಳತೆಯ ವಿರುದ್ಧ ಹತಾಶೆ, ದಣಿವು, ಸಿಟ್ಟು, ಪಲಾಯನದ ಆಸೆ ಹೀಗೆ ಎಲ್ಲವೂ ಬೆರೆತು ರೊಮ್ಯಾಂಟಿಕ್ ಕಾವ್ಯದ ಚೌಕಟ್ಟು ರೂಪಿತವಾಯಿತೆಂಬುದು ಗಮನಾರ್ಹ.

ಹಾಗೆಯೇ ಈ ಮೊದಲು ನವೋದಯದ ಆದ್ಯ ಪ್ರವರ್ತಕರಾದ ಬಿ.ಎಂ.ಶ್ರೀ ಅವರಿಂದಲೇ ನಿಸರ್ಗದ ವರ್ಣನೆಯು ಕನ್ನಡ ದೇವಿಗೆ ಮಾಡುವ ಆರಾಧನೆಯಾಗಿದ್ದು, ಅವರ ಸ್ವತಂತ್ರವಾದ ಪದ್ಯಗಳಲ್ಲಿ ಸಮಾಜ, ಪರಿಸರ ಹಾಗೂ ಸಮಾಜದ ಸ್ಥಿತ್ಯಂತರ ಕಲ್ಪನೆಯ ಆರಂಭವನ್ನು ಪ್ರತೀಕವಾಗಿ ನಿಲ್ಲುವುದನ್ನು ಗಮನಿಸಬಹುದು. ಉದಾಹರಣೆಗೆ,

"ಮುದುಕಿ ಎಳೆಯವಳಾಗಿ ಮೂಸು ಮಿಂಚೆಳೆಯಾಗಿ
ಸವೆದ ಮೈ ತುಂಬಿ ಕಡಲ ತೆರೆಗಳನುಟ್ಟು
ಬೆಟ್ಟ ಬಯಲನು ತೊಟ್ಟು ಅರಿಲ ಮುಡಿಗಿಟ್ಟು
ಮುಗುಳ್‌ನಗೆಯ ನಸುನಕ್ಕಳಾ ತಾಯಿ
ನನ್ನ ತಲೆಯಲಿ ಕೈಯ ತಾವರೆಯನ್ನಿಟ್ಟು" (ಕನ್ನಡ ತಾಯ ನೋಟ – ಬಿ.ಎಂ.ಶ್ರೀ)

ಆದರೆ ಅನಂತರ ಈ ನಿಸರ್ಗದ ಆರಾಧನೆಯು ಮುಂದೆ ಬರುವ ಕವಿಗಳಲ್ಲೂ ಬದುಕಿನ ಬೇರೆ ಬೇರೆ ಮುಖಗಳಿಗೆ ನುಡಿ ಕೊಡುವ ಮೂಲಕ ವೈಶಿಷ್ಟ್ಯತೆಯನ್ನು ಪಡೆದುಕೊಂಡಿತ್ತೆಂಬುದನ್ನು ನಾವು ತಿಳಿಯಬಹುದು.

"ಭಾರತ ಜನನಿಯ ತನು ಜಾತೆ
ಜಯಹೇ ಕರ್ನಾಟಕ ಮಾತೆ (ಕುವೆಂಪು ಸಮಗ್ರ ಕಾವ್ಯ –೧ ಪುಟ–೧೪೪)
..............................................
ಹಸುರಿನ ಗಿರಿಗಳ ಸಾಲೇ
ನಿನ್ನಯ ಕೊರಳಿನ ಮಾಲೆ"
ಹಸುರತ್ತಲ್ ! ಹಸುರಿತ್ತಲ್ !
ಹಸುರೆತ್ತಲ್ ಕಡಲಿನಲಿ
ಹಸರ್‌ಗಟ್ಟಿತೊ ಕವಿಯಾತ್ಮಂ
ಹಸುರ್ ನೆತ್ತರ್ ಒಡಲಿನಲಿ !" (ಹಸುರು, ಪಕ್ಷಿಕಾಶಿ)

"ಹೋಗುವೆನು ನಾ ಹೋಗುವೆನು ನಾ ನನ್ನ ಒಲುಮೆಯ ಗೂಡಿಗೆ
ಮಲೆಯ ನಾಡಿಗೆ ಮಳೆಯ ಬೀಡಿಗೆ ಸಿರಿಯ ಚೆಲುವಿನ ಗೂಡಿಗೆ
ಬೇಸರಾಗಿದೆ ಬಯಲು ಹೋಗುವೆ ಮಲೆಯ ಕಣಿವೆಯ ಕಾಡಿಗೆ
ಹಸರು ಸೊಂಪಿನ ಬಿಸಿಲು ತಂಪಿನ ಗಾನದಿಂಪಿನ ಗೂಡಿಗೆ"
('ಹೋಗುವೆನು ನಾ' – ಶ್ರೀಕುವೆಂಪು)

"ಹೂತದ ಹುಣಸಿಯೂ ಚಿಗುರು
ಮದರಂಗಿ ಬಣ್ಣದುಗುರು
ರುಚಿಗೆ ಹುಳಿಮೊಗರು
ನೋಡೆ ಜೀವಕ್ಕ ಎನಿತ ಹಗುರು" ('ಹೂತದ ಹುಣಸಿ – ದ.ರಾ.ಬೇಂದ್ರೆ)

"ಬೆಳದಿಂಗಲ್ ರಾತ್ರೀಲಿ ಈ ಚೋರಿ ಬತ್ತಂದ್ರೆ
ಈಚ್ಲೆಂಡ ಬೆಲ್ಡಮಗೆ ನೆಪ್ಪಾಯ್ತದೆ
ಆಕಾಸದ್ ಚಂದ್ರನ್ನ ಪಡಕಾನೆ ದೀಪಕ್ಕೆ
ವೋಲಿಸ್ದೆ ವೋಯ್ತುಂದರೆ ತಪ್ಪಾಯ್ತದೆ" ('ರತ್ನನ್ ಪದಗಳು' – ಜಿ.ಪಿ. ರಾಜರತ್ನಂ)

ಹೀಗೆ ಇನ್ನು ಮೊದಲಾದ ಕವಿಗಳ ಕವಿತೆ, ಕಥೆ, ಕಾದಂಬರಿ, ಪ್ರಬಂಧಗಳಲ್ಲಿ ಪರಿಸರವು ಒಂದು ಪ್ರಮುಖ ಪಾತ್ರವಾಗಿ ಬಂದು, "ಪ್ರಕೃತಿಯಾರಾಧನೆಯೆ ಪರಮಾರಾಧನೆ" ಎಂದು ಒಂದು ಮಹತ್ವದ ಸ್ಥಾನವನ್ನು ಪಡೆದುಕೊಂಡಿತು. ಅವುಗಳಲ್ಲಿ ಬೇಂದ್ರೆಯವರ "ಪಾತರಗಿತ್ತಿ ಪಕ್ಕ", ಕುವೆಂಪು ಅವರ "ದೇವರು ರುಜು ಮಾಡಿದನು", "ಮಲೆಗಳಲ್ಲಿ ಮದುಮಗಳು", "ಶೂದ್ರ ತಪಸ್ವಿ", ಕಾರಂತರ 'ಮರಳಿ ಮಣ್ಣಿಗೆ", "ಕುಡಿಯರ ಕೂಸು", 'ಮಿರ್ಜಿ ಅಣ್ಣರಾಯ ಅವರ 'ನಿಸರ್ಗ', ರಾವ್ ಬಹದ್ದೂರರ 'ಗ್ರಾಮಾಯಣ', ಮಾಸ್ತಿ ಅವರ 'ನವರಾತ್ರಿ', 'ಕಾಕನಕೋಟೆ' ಇನ್ನು ಮೊದಲಾದ ಪ್ರಮುಖ ಕೃತಿಗಳ ಮೂಲಕ ಪ್ರಕೃತಿ ಬದುಕಿನ ಒಂದು ಮಹತ್ವದ ಅಂಶವಾಗಿ ಗುರುತಿಸಿಕೊಂಡಿತೆಂಬುದು ಗಮನಾರ್ಹ.

**೩.೬ ನಾಡು – ನುಡಿ ಕುರಿತ ವಿಚಾರಗಳು :**

ನಾಡು – ನುಡಿಯ ಸಂವೇದನೆಯು ಆಧುನಿಕ ಕನ್ನಡ ಸಾಹಿತ್ಯಕ್ಕೆ ನೀಡಿದ ಮಹತ್ತರವಾದ ಪ್ರೇರಣೆಗಳಲ್ಲಿ ಒಂದಾಗಿದ್ದು, ಈ ನಾಡ ಭಕ್ತಿ, ನುಡಿಯ ಪ್ರೇಮವು ರಾಷ್ಟ್ರೀಯತೆಯ ಒಂದು ಪ್ರಮುಖ ಅಂಗ. ಹಾಗಾಗಿ ಈ ನಾಡು – ನುಡಿಯ ಹಿರಿಮೆ ಮತ್ತು ಗರಿಮೆಗಳು ನವೋದಯ ಕವಿಗಳಿಗೆ ಸ್ಫೂರ್ತಿಯ ಕೇಂದ್ರವಾಯಿತು. ಅಂತೆಯೆ ಇದು, "ಅವರು ಈ ಪರಿಸರಕ್ಕೆ ತೋರಿದ ಪ್ರತಿಕ್ರಿಯೆ ವೈಚಾರಿಕವಾದುದಲ್ಲ. ಭಾವನಾತ್ಮಕವಾದುದಲ್ಲ, ಆದರ್ಶವಾದುದು". ಈ ನಾಡು – ನುಡಿಯ ಪ್ರೀತಿ, ಪ್ರೇಮ, ಗೌರವ, ಅಭಿಮಾನವು ರಾಷ್ಟ್ರೀಯತೆಯ ಉಪರಾಷ್ಟ್ರೀಯ ಪ್ರಜ್ಞೆ ಎಂದರೆ ತಪ್ಪಾಗಲಾರದು. ಅಂದರೆ ಆ ಹೊತ್ತಿನ ಈ ಪ್ರಜ್ಞೆಯು "ಭೂಮಿಯಲ್ಲಿ ಅಡಗಿಹೋದ ಭವ್ಯ ದೇವಾಲಯವೊಂದು ಮೇಲೆದ್ದು ನಿಂತ ಹಾಗೆ ಕನ್ನಡ ಸಂಸ್ಕೃತಿಯ ಭವ್ಯ ಚಿತ್ರವು ಆ ಕಾಲಕ್ಕೆ ನಿಂತಿತು". ಇದು ಅಂದು ಸ್ವತಂತ್ರ ಭಾರತ ಕಲ್ಪನೆಯಂತೆಯೆ ಅಖಂಡ ಕರ್ನಾಟಕದ ಕಲ್ಪನೆಯೂ ಒಂದು ಆದಮ್ಯ ಆದರ್ಶವಾಯಿತು.

ಅಂತೆಯೆ ಇದು "ಭಾರತೀಯರಿಗೆ ಮತ್ತು ಕನ್ನಡಿಗರಿಗೆ ಲುಪ್ತವಾಗಿದ್ದ ಆತ್ಮ ಗೌರವವನ್ನು ಮರಳಿ ಸಂಪಾದಿಸಿಕೊಡುವ ಸಲುವಾಗಿ, ದೇಶಭಕ್ತಿ, ಭಾಷಾ ಪ್ರೇಮಗಳಂತಹ ಭಾವ ನಿರ್ಭರವಾದ ಸಂಗತಿಗಳನ್ನು ಆರಿಸಿಕೊಳ್ಳುವುದು ಅಂದಿನ ಕವಿಗಳಿಗೆ ಅನಿವಾರ್ಯವಾಗಿತ್ತು. ಸಮಾಜದ ಅನುಕ್ತ ಬೇಡಿಕೆಗಳಿಗೆ ಅನುಗುಣವಾಗಿಯೇ, ಕ್ರಾಂತದರ್ಶಿಗಳಾದ ಕವಿಗಳು ಕಾವ್ಯ ವಸ್ತುವನ್ನು ಆರಿಸಿಕೊಳ್ಳುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಆದರೆ ದೇಶದ ರಾಜಕೀಯ ಏಕತೆಯು ಸಾಧ್ಯವಾಗದೇ ಹೋಗಿದ್ದಾಗ, ಸಾಂಸ್ಕೃತಿಕ ಏಕತೆಯು ಹಿಂದೂ ಧರ್ಮದ ಸರ್ವಸಮಾನ ಅಂಶಗಳಿಂದಲೇ ರೂಪಿತವಾಗುತ್ತಿದ್ದಾಗ ರಾಜಕೀಯ ಸ್ಥಳದಲ್ಲಿ ದೇಶಭಕ್ತಿಯನ್ನು ಸ್ಥಾಪಿಸುವುದೂ ಕೂಡ ಹೊಸ ಸಾಧನೆ ಆಗಿತ್ತು" ಅಂದರೆ ಈ ಮಾತು ಅಂದಿನ ವಿವಿಧತೆಯಲ್ಲಿ ಏಕತೆಯ ಸಾಧಿಸುವ ಸಮರ್ಥನೆಯಾಗಿದ್ದು, ಅದನ್ನು ಭಾಷೆ ಮತ್ತು ರಾಷ್ಟ್ರೀಯತೆಗಳನ್ನು ಒಂದೇ ನಾಣ್ಯದ ಎರಡು ಮುಖಗಳಾಗಿ ಪರಿಗಣಿಸಿ ತೋರಿಸುವ ಬಗೆಯದ್ದಾಗಿದೆ. ಉದಾಹರಣೆಗೆ, ಕುವೆಂಪು ಅವರು ಕರ್ನಾಟಕ ಮಾತೆಯನ್ನು 'ಭಾರತ ಜನನಿಯ ತನುಜಾತೆ' ಎಂದು ಕರೆಯುವುದು, ದ.ರಾ. ಬೇಂದ್ರೆ ಅವರು ಭಾರತ ಮಾತೆಯನ್ನು 'ಕನ್ನಡ ಕಂದವ್ವನ ಲಾಲಿ' ಎಂದು ಹಾಡಿರುವ ಬಗೆ ಈ ಸಮನ್ವತೆಯ ಸಾಧನೆಯೆಂದು ನಾವಿಲ್ಲಿ ಅರಿಯಬಹುದು.

ಈ ದಿಸೆಯಲ್ಲಿ ಬಿ.ಎಂ.ಶ್ರೀ ಅವರ ಹೆಸರು ತುಂಬ ಮಹತ್ವದ್ದು. ಅವರು ಪಶ್ಚಿಮದ ಸಂವೇದನೆಯ ಮೂಲಕ ಕನ್ನಡ ನಾಡು – ನುಡಿಯನ್ನು ಕಸಿಗೊಳಿಸಿದ ಬಗೆಯು ತುಂಬ ಅಪೂರ್ವವಾದುದ್ದಾಗಿದೆ. ಇದನ್ನು ಅವರು ಶ್ರೀ ಕುವೆಂಪು, ಶ್ರೀ ಬೇಂದ್ರೆ ಮೊದಲಾದವರಿಗಿಂತ ಮೊದಲೇ ತಮ್ಮ 'ಇಂಗ್ಲಿಷ್ ಗೀತೆಗಳಲ್ಲಿ' ಮೊತ್ತ ಮೊದಲು ದಾಖಲಿಸಿ ವಸ್ತು, ಭಾಷೆ, ಅನುಭವ, ಛಂದಸ್ಸಿನಲ್ಲಿ ಒಂದು ಹೊಸ ಹೊಸ ಮಾರ್ಗವನ್ನು ತೆರೆದಿದ್ದಾರೆ. "ಶ್ರೀ ಅವರು ಪರಂಪರೆಯೊಂದಿಗೆ ಮುಖಾಮುಖಿ ಆಗುವ ಎಷ್ಟೋ ಪ್ರಗತಿಶೀಲರಿಗಿಂತ ಹೆಚ್ಚಿನ ಆಧುನಿಕ ಮನಸ್ಸಿನವರಾಗಿದ್ದು, ಸಂಸ್ಕೃತದ, ಮತಧರ್ಮದ ಅದಿಪತ್ಯಗಳಿಂದ ಸಾಹಿತ್ಯ – ಸಂಸ್ಕೃತಿಗಳನ್ನು ಪಾರು ಮಾಡುವ ಮೂಲಕ, ಕನ್ನಡ ಸ್ವಂತಿಕೆಯನ್ನು ಬೆಳೆಸುವ ವಿಕೇಂದ್ರೀಕರಣವಾದಿ" ಆಗಿದ್ದರೆಂಬುದು ಗಮನಾರ್ಹ. ಅಂತೆಯೆ ಅವರು ಪಾಶ್ಚಾತ್ಯ ಸಾಹಿತ್ಯವನ್ನು ಒಪ್ಪಿಕೊಂಡರೂ ಅವರು ಕನ್ನಡವನ್ನು ಮರೆಯಲಿಲ್ಲ.

"ಪಡುವ ಕಡಲ ಹೊನ್ನ ಹೆಣ್ಣು ನನ್ನ ಜೀವದುಸಿರು ಕಣ್ಣು" (ಕಾಣಿಕೆ)

"ಮೊದಲ ತಾಯ ಹಾಲ ಕುಡಿದು
ಲಲ್ಲೆಯಿಂದ ತೊದಲಿ ನುಡಿದು ಕೆಳೆಯರೊಡನೆ ಬೆಳೆದು
ಬಂದ ಮಾತದಾವುದು. ನಲ್ಲೆಯೊಲವ ಪಡೆದು ತಂದ ಮಾತದಾವುದು" (ಕಾಣಿಕೆ)

"ಕೇಳಣ್ಣ, ನಾನೊಬ್ಬ ಹಳೆಯ ಮುತ್ತೈದೆ ಹಿರಿದಾಗಿ ಬಾಳಿದಲೊಮ್ಮೆ!
ಈಗ ಬಡತನ, ಬಡವ ಬಡವಾದೆ : ಬಡವಾದ ಮಕ್ಕಳನ್ನು ನೋಡಿ!
ಬತ್ತಿ ಮತ್ತಿ ಮಾಡಿಯ ಸೊರಗಿನಲ್ಲಿ ಬಡವಾದೆ. ಸಾವಿಲ್ಲ ನನೆ!
ಹೆರರ ನುಡಿ, ಹೆರರ ನಡೆಯಿಂದ ತುಂಬಿದ ಮನೆಯನ್ನು ನೋಡಿ
ಕನ್ನಡ ತಾಯಿ ನಿಟ್ಟುಸಿರು ಬಿಟ್ಟಿದ್ದಾಳೆ" (ಕನ್ನಡ ತಾಯ ನೋಟ)

"ನಿನ್ನ ಪುಣ್ಯವ ಪಡೆಯಬಾರದಿರುವ ಜನರೆಲ್ಲ
ಕ್ರೂರ ರಾಜರ ಬಾಧೆಯಿಂದ ಕೃತವಾಗಿ
ನಿನ್ನ ಮಹಿಮೆಗೆ ಹೆದರಿ, ಕುರುಬ, ಮಿಡಿಯುತ್ತಿರಲು
ಧೀರ ಸ್ವಾತಂತ್ರ್ಯದಲಿ ನೀನು ವರ್ಧಿಸುವೆ!" (– ಅ ಆಳೌಬ್ರಿಟಾನಿಯಾ)

ಹೀಗೆ ಶ್ರೀ ಅವರು ಅವರ ಮನಸ್ಸಿನ ತುಡಿತವೆಲ್ಲ ವಸಾಹತು ಸಂಸ್ಕೃತಿ ಕಡೆಗೇ ಹೆಚ್ಚು ಒಲವು ಇದ್ದು ವ್ಯಕ್ತವಾಗಿರುವುದನ್ನು ನಾವು ಮರೆಯುವಂತಿಲ್ಲ. ಅಂತೆಯೆ ಅವರ ಅಂಜಿದ ಒಳ ಮನಸ್ಸಿನಲ್ಲಿ ಅದಮ್ಯ ಕನ್ನಡ ಅಭಿಮಾನ ಪ್ರೀತಿ ಇದೆ ಎಂಬುದನ್ನು ನಾವಿಲ್ಲಿ ಅರಿಯುವುದು ಅವಶ್ಯಕವಾಗಿದೆ.

ಆದರೆ ಅನಂತರ 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು" ಎಂದು ಹುಯಿಲಗೋಳ ನಾರಾಯಣ ರಾಯರು ಏಕೈಕ ಕರ್ನಾಟಕದ ಕನಸು ನನಸಾಗಲೆಂದು ಹಾಡುವ ಮೂಲಕ ದೀಕ್ಷೆಯನ್ನು ಕೊಟ್ಟರು. ಕುವೆಂಪು ಅವರು ಕನ್ನಡ ಡಿಂಡಿಮವನ್ನು ಬಾರಿಸುತ್ತಾ 'ಕರ್ನಾಟಕ ಒಂದೇ' 'ಇದ್ದರೂ ಒಂದೇ', 'ಇಲ್ಲದಿದ್ದರೂ ಒಂದೇ', 'ಎಲ್ಲಾದರೂ ಎಂತಾದರೂ ಇರು ಎಂದೆಂದಿಗೂ ನೀ ಕನ್ನಡವಾಗಿರಿ', 'ಕನ್ನಡ ಕಂದವ್ವನ ಲಾಲಿ' ಹಾಡಿ ಹರಸಿದರು. ಜಿ.ಎಸ್.ಎಸ್. ಅವರು 'ನಾವೆಲ್ಲರೂ ಒಂದು, ಕೇರಳದ ಜನರು' ಎಂದರೆ : ಡಿ.ಎಸ್. ಕರ್ಕಿ ಅವರು 'ಹಚ್ಚೇವು ಕನ್ನಡ ದೀಪ' ಎಂದು ಹಾಡಿದರು. ಚೆನ್ನವೀರ ಕಣವಿ ಅವರು 'ವಿಶ್ವಭಾರತಿಗೆ ಕನ್ನಡದಾರತಿ ............ ಮೊಳಗಲಿ ಮಂಗಳ ಜಯಭೇರಿ' ಎಂದರೆ, ಇನ್ನೊಂದು ಕಡೆ ರಾಷ್ಟ್ರಕವಿ ಕುವೆಂಪು ಅವರು ಅಖಂಡ ಕರ್ನಾಟಕ : ಅಲ್ತೊ ನಮ್ಮ ಕೂಗಾಟದ ರಾಜಕೀಯ ನಾಟಕ! .......... ಕರ್ನಾಟಕ ಎಂಬುದೇನು ಹೆಸರೆ ಬರಿಯ ಮಣ್ಣಿಗೆ? ಮಂತ್ರ ಕಣಾ! ಶಕ್ತಿ ಕಣಾ! ತಾಯಿ ಕಣಾ! ದೇವಿ ಕಣಾ! ಬೆಂಕಿ ಕಣಾ! ಸಿಡಿಲು ಕಣಾ! ........" ಎಂದು ಗುಡುಗಿದರು. ಹೀಗೆ ದೇಶಿಯ ಭಾಷೆಗಳು ಪ್ರಸಿದ್ಧಿಗೆ ಬರಲಿದ್ದ ಹೊಸಕಾಲದಲ್ಲಿದ್ದ ನವೋದಯ ಕವಿಗಳು ಕನ್ನಡದ ನುಡಿಯನ್ನು ವರ್ಣಿಸಿದ್ದು, ಅದರ ಪ್ರಗತಿಗೆ ದುಡಿದಿದ್ದಾರೆ. ಅಲ್ಲದೆ ಅದಕ್ಕಿದ್ದಂತಹ ಕಾಲ್ತೊಡಕುಗಳ ಬಗ್ಗೆಯೂ ಕತ್ತಿ ಎತ್ತಿದ್ದಾರೆಂಬುದು ಗಮನಾರ್ಹ. 'ಎನಿತು ಇನಿದು ಈ ಕನ್ನಡ ನುಡಿಯು' ಎಂದೂ ಕನ್ನಡದಲಿ ಹರಿ ಬರೆಯುವನು, ಕನ್ನಡದಲಿ ಹರಿ ತಿರಿಯುವನು' 'ಅಳುಕದೀ ಕನ್ನಡಂ ಅಳಿಯದೀ ಕನ್ನಡಂ ಉಳಿವುದೀ ಕನ್ನಡಂ', 'ಕನ್ನಡ

ಎನೆ ಕುಣಿದಾಡುವುದೆನ್ನೆದೆ; ಕನ್ನಡ ಎನೆ ಕಿವಿ ನಿಮಿರುವುದು'. 'ಸಾಯುತಿದೆ ನಮ್ಮ ನುಡಿ ಓ ಕನ್ನಡ ಕಂದದಿರಾ ........... ರಾಜನುಡಿ ಎಂದೆಂದೂ ರಾಷ್ಟ್ರ ನುಡಿ ಎಂದೊಂದು' ಎಂದು ಎಚ್ಚರಿಸಿ, ಪಾರು ಮಾಡೆಮ್ಮನೀ ಇಂಗ್ಲಿಷ್‌ನಿಂದ' ಎಂದು ಗುರುತಿಸಿದ್ದಾರೆ. ರಾಜರತ್ನಂ ಅವರ ಕನ್ನಡ ಭಕ್ತಿ ತುಂಬಿದ ಮನಸ್ಸನ್ನು ಇನ್ನೊಬ್ಬರಲ್ಲಿ ಕಾಣುವುದು ಕಷ್ಟ. ಉದಾ. ಕನ್ನಡ ಸುದ್ದೀಗ್ ಏನ್ರ ಬಂದ್ರೆ ಮಾನಾವುಳ್ಸಕಿಲ್ಲ! ನರಕಕ್ಕ ಇಳ್ಸಿ ನಾಲ್ಗೆ ಸೀಳ್ಸಿ ಬಾಯ್ ಒಲಿಸಾಕಿದ್ರೂನೆ – ಮೂಗ್ನಲ್ ಕನ್ನಡ ಪದವಾಡ್ತೀನಿ!" ಎಂದು ಹಾಡಿರುವ ಅವರ ಕನ್ನಡ ಪ್ರೀತಿಯನ್ನು ಪ್ರಮುಖ ಕವನಗಳಲ್ಲಿ ನಾವು ಗಮನಿಸಬಹುದು.

ಒಟ್ಟಿನಲ್ಲಿ ಈ ಅಖಂಡ ಕರ್ನಾಟಕದ ಹಿನ್ನೆಲೆಯಲ್ಲಿ ರಾಷ್ಟ್ರಭಾಷೆ, ದೇಶ ಭಾಷೆಗಳ ಸಮನ್ವಯವನ್ನು ಸಾಧಿಸಲು ಜೀವಂತ ರಾಷ್ಟ್ರೀಯತೆಯನ್ನು ರೂಪಿಸಲು ನವೋದಯ ಕವಿ, ಕಥೆ – ಕಾದಂಬರಿಕಾರರು ಸಾಕಷ್ಟು – ಪ್ರಭಾವವನ್ನು ಪಡೆದುಕೊಂಡರೆಂಬುದು ಗಮನಾರ್ಹ.

**೩.೭ ರಾಷ್ಟ್ರೀಯ ಪ್ರಜ್ಞೆಯ ಪ್ರಭಾವಿತ ವಿಚಾರಗಳು :**

ಆಧುನಿಕ ಕನ್ನಡ ನವೋದಯ ಸಾಹಿತ್ಯವನ್ನು ರೂಪಿಸಿದ ಮಹತ್ವದ ಅಂಶಗಳಲ್ಲಿ ರಾಷ್ಟ್ರೀಯತೆಯೂ ಒಂದು. "ರಾಷ್ಟ್ರ ಎಂಬ ಪದವು ಅತ್ಯಂತ ಪ್ರಾಚೀನವಾಗಿದ್ದು, 'ರಾಷ್ಟ್ರೀಯತೆ'ಯ ಕಲ್ಪನೆ ಮಂತ್ರ ಆಧುನಿಕತೆಯಿಂದ ಬಂದುದ್ದಾಗಿದೆಂದು" ಗುರುತಿಸಲಾಗುವುದು. ಅಂತೆಯೆ ಈ 'ರಾಷ್ಟ್ರೀಯತೆ' ಪರಿಕಲ್ಪನೆಯನ್ನು ಅಂದು ಎರಡು ಬಗೆಯಿಂದ ಗುರುತಿಸುತ್ತಿದ್ದರು. ಒಂದು, ರಾಜಕೀಯವಾಗಿ ಸ್ವಾತಂತ್ರ್ಯ ಪೂರ್ವದಲ್ಲಿ ಈ ದೇಶದ ಜನರು 'ರಾಜಭಕ್ತಿ'ಗೆ ತೋರುತ್ತಿದ್ದ ಪ್ರೀತಿ, ಗೌರವದ ನಂಬಿಕೆ. ಮತ್ತೊಂದು, ಕ್ರಮೇಣ ಇದೇ ಬಗೆಯ ಜನರು ಆ ಪ್ರಭುತ್ವದಿಂದ ಬಿಡುಗಡೆಯಾಗಲು ಬಯಸಿದ ಸ್ವಾತಂತ್ರ್ಯ ಪೂರ್ವದಲ್ಲಿ ಈ ದೇಶದ ಜನರು 'ರಾಜಭಕ್ತಿ'ಗೆ ತೋರುತ್ತಿದ್ದ ಪ್ರೀತಿ, ಗೌರವದ ನಂಬಿಕೆ. ಮತ್ತೊಂದು, ಕ್ರಮೇಣ ಇದೇ ಬಗೆಯ ಜನರು ಆ ಪ್ರಭುತ್ವದಿಂದ ಬಿಡುಗಡೆಯಾಗಲು ಬಯಸಿದ ಸ್ವಾತಂತ್ರ್ಯ ಸಂಪಾದನೆಯ ಹೋರಾಟವನ್ನು 'ರಾಷ್ಟ್ರೀಯ ಚಳುವಳಿಯೆಂದು ಕರೆಸಿಕೊಂಡಿದ್ದರಿಂದ ಗುರುತಿಸಬಹುದು. ಇದರ ಪರಿಣಾಮ ಸ್ವಾತಂತ್ರ್ಯ ಹೋರಾಟ, ರಾಜ್ಯಗಳ ವಿಕೇಂದ್ರೀಕರಣ ಮತ್ತು ವಶೀಕರಣಗಳು ಸೃಷ್ಟಿಯಾಗಿದ್ದು ಗಮನಾರ್ಹ.

ಆದರೆ ಭಾರತ ಖಂಡವು ಪ್ರಾಚೀನ ಕಾಲದಿಂದಲೂ 'ಛಪ್ಪನ್ನ' ಮುಖವಾಗಿದ್ದು, ವಿವಿಧ ಪ್ರಾಂತ್ಯ, ಏಕೀಯತೆ ಮತ್ತು ವಿವಿಧ ಭಾಷೆಗಳಿಂದ ಕೂಡಿದ ಪ್ರತ್ಯೇಕತೆಗಳನ್ನು ಹೊಂದಿದ್ದರೂ, ಸಾಂಸ್ಕೃತಿಕವಾಗಿ ತಾವುಗಳೆಲ್ಲಾ 'ಭಾರತೀಯರು' ಎಂಬ ಮನೋಧರ್ಮದಿಂದ ಬದುಕುತ್ತಿದ್ದರೆಂಬುದು ದಾಖಲೆಗಳಿಂದ ಗಮನಾರ್ಹ. ಹಾಗಾಗಿ 'ಭಾರತೀಯತೆ' ಎಂಬುದು

'ರಾಷ್ಟ್ರೀಯತೆ'ಯಲ್ಲಿಯೆ ಅಂತರ್ಗತವಾದ ಒಂದು ಭಾವಕೋಶವೆಂದು ಗುರುತಿಸಬಹುದು. ಆದರೆ ಎರಡೂ ಪದಗಳು ಒಂದೇ ಅಲ್ಲವೆಂಬುದನ್ನು ನಾವು ಮನವರಿಕೆ ಮಾಡಿಕೊಳ್ಳುವುದು ಅಗತ್ಯ. ಆದರೆ ಬಹಳಷ್ಟು ಮಂದಿಯು (ಬರಹಗಾರರು) ಒಂದೇ ಎಂದು ಭಾವಿಸುತ್ತಾ ಬಂದಿರುವುದು ಇದೆ. ಹೀಗಾಗಿ 'ರಾಷ್ಟ್ರೀಯತೆ' ಎಂಬುದು ಸ್ವಾತಂತ್ರ್ಯ ಚಳುವಳಿಯಲ್ಲಿ ದೇಶಕ್ಕೆ ಜನರು, ಬರಹಗಾರರು ತೋರಿದ ಭಕ್ತಿಯ ಪರಿಕಲ್ಪನೆ ಎಂದು ಮನವರಿಕೆ ಮಾಡಿಕೊಳ್ಳುವುದು ಅವಶ್ಯಕ.

ಆದುದರಿಂದ ಈ ಹಿನ್ನೆಲೆಯಲ್ಲಿ ರಾಷ್ಟ್ರೀಯತೆ, ರಾಷ್ಟ್ರೀಯ ಪ್ರಜ್ಞೆಯು ವಸಾಹತುವಾದಿಗಳ ವಿರುದ್ಧ ಬೆಳೆಸಿಕೊಂಡ ಒಂದು ಪ್ರಮುಖ ಸಂವೇದನೆಯಾಗಿದ್ದು, ಆ ದಾಸ್ಯದಿಂದ ಬಿಡುಗಡೆಗೊಳ್ಳುವುದು "ನಮ್ಮ ಜನ್ಮಸಿದ್ಧ ಹಕ್ಕು" ಎಂದು ಕವಿಗಳು ತಂತಮ್ಮ ಕಾವ್ಯ, ಕಥೆ, ಕಾದಂಬರಿ ಬರಹಗಳಲ್ಲಿ ನುಡಿ ಕೊಟ್ಟಿದ್ದಾರೆ. ಅವರಲ್ಲಿ ಬಿ.ಎಂ.ಶ್ರೀ ಅವರು 'ಭಾರತಮಾತೆ', 'ಕನ್ನಡ ತಾಯ್ ನೋಟ' ಕುವೆಂಪು ಅವರ 'ಭಾರತ ತಪಸ್ವಿನಿ', 'ನಡೆ ಮುಂದೆ . . . . ನುಗ್ಗಿ ನಡೆ ಮುಂದೆ', ಬೇಂದ್ರೆ ಅವರ 'ಇದೋ ಹೊರಟೆವು ಬಿಡುಗಡೆಗಾಗಿ', ಪಂಜೆ ಅವರ 'ಎದ್ದೇಳು', ಬೆಟಗೇರಿ ಕೃಷ್ಣಶರ್ಮ ಅವರ 'ಭಾರತೀಯರು ನಾವು', ಕಯ್ಯಾರ ಕಿಞ್ಞಣ್ಣರೈ ಅವರ 'ಐಕ್ಯಗಾನ', ಸಿಂಪಿ ಅವರ 'ನಾಡಿನಜ್ಜ', 'ಶಾಣ್ಯಾಗಾಂಧೀ', ಜಿ.ಎಸ್. ಶಿವರುದ್ರಪ್ಪ ಅವರ 'ಕಂಡದ್ದು ಮೂರು ಸಲ' ದಿನಕರ ದೇಸಾಯಿ ಅವರ 'ನಾಡವರು', ಬೇಂದ್ರೆ ಅವರ 'ಮೂವತ್ತು ಮೂರು ಕೋಟಿ', ವಿ.ಸಿ. ಅವರ 'ಮೃಗಶಾಲೆ ಸಿಂಹಗಳು' ಹಾಗೂ ಇನಾಂದರರ 'ಮೂರಾಬಟ್ಟೆ', ಕಾರಂತರ ಔದಾರ್ಯದ ಉರುಳಲ್ಲಿ', ಕೋ ಚೆನ್ನಬಸಪ್ಪ ಅವರ 'ಹಿಂದಿರುಗಿ ಬರಲಿಲ್ಲ', ಬಸವರಾಜ ಕಟ್ಟೀಮನಿ ಅವರ 'ಸ್ವಾತಂತ್ರ್ಯದೆಡೆಗೆ, 'ಮಾಡಿಮಡಿದವರು', ಭಾರತೀಪ್ರಿಯರ 'ಮೋಚಿ' ಹೀಗೆ ಇನ್ನು ಮೊದಲಾದ ಕೃತಿಗಳು ಗಮನಾರ್ಹ : ಉದಾಹರಣೆಗಾಗಿ ಕೆಲವು ಕವನಗಳ ಸಾಲುಗಳನ್ನು ನಾವಿಲ್ಲಿ ಗಮನಿಸೋಣ.

"ನೂರು ದೇವರನೆಲ್ಲ ನೂಕಾಚೆ ದೂರ
ಭಾರತಾಂಬೆಯ ದೇವಿ ನಮಗಿಂದು ಪೂಜಿಸುವ ಬಾರ"

(ಇಂದಿನ ದೇವರು, ಕುವೆಂಪು ಸಮಗ್ರ ಕಾವ್ಯ-೧ಪುಟ-೧೪೪)

"ಚಂಡಿ ಚಾಮುಂಡಿ ಪೇಳ್ ಬೇಕಾದುದೇನು?
ಗಂಡುಸಾದರೆ ನಿನ್ನ ಬಲಿಗೊಡವೆಯೇನ್?"

(ದ.ರಾ. ಬೇಂದ್ರೆ,ಸಮಗ್ರ ಕಾವ್ಯ, ಕನಸಿನೊಳಗೊಂದ ಕನಸು – ಪುಟ-೧೭೩)

"ನಮ್ಮ ಮನೆಯಲ್ಲಿ ನಮಗೆ ಸ್ವಾತಂತ್ರವಿಲ್ಲವೇನು?
ಈ ದಾಸ್ಯದಿಂದೆಮಗೆ ಉದ್ಧಾರವಿಲ್ಲವೇನು?" (ಗಂಡುಗೊಡಲಿ – ರಾಜರತ್ನಂ)

"ಬಂಧನ ಬಂದಷ್ಟು ಸವಿವೆವು ಸ್ವಾತಂತ್ರ್ಯ ತರುವವರು
ಅದರ ಹೊಣೆಯ ಹೊರುವರು
ಏನೆ ಇರಲಿ ಅಜ್ಞತೆ/ಇಕೋ ಈ ಕೃತಜ್ಞತೆ"

('ಸಮರದಲ್ಲಿ ಅಮರರಾದ ಧೀರ ಪೂರ್ವಜರು ಅವರು' – ದ.ರಾ.ಬೇಂದ್ರೆ)

ಒಟ್ಟಿನಲ್ಲಿ ಹಿಂದೆ ವೇದ, ಯಜ್ಞ ಗೀತೆಗಳು ಪವಿತ್ರೀಕರಣಗೊಂಡಂತೆ ಆಧುನಿಕ ಕನ್ನಡ ನವೋದಯ ಸಾಹಿತ್ಯದಲ್ಲಿ 'ರಾಷ್ಟ್ರ', 'ರಾಷ್ಟ್ರಭಕ್ತಿ', 'ಸ್ವಾತಂತ್ರ್ಯ' ಮತ್ತು 'ಸರ್ವೋದಯ', 'ಜಾತ್ಯಾತೀತ', 'ಸಂವಿಧಾನ' ಇತ್ಯಾದಿಗಳು ಪವಿತ್ರಕರಣಗೊಂಡಿವೆ. ಜನರನ್ನು ಹೊರತುಪಡಿಸಿ ರಾಷ್ಟ್ರದ ಪರಿಕಲ್ಪನೆಯನ್ನು ಕಟ್ಟಿಕೊಂಡ ೧೯ನೆಯ ಶತಮಾನದ ದೇಶಭಕ್ತರು, ದೇಶಭಕ್ತ ಕವಿಗಳು ದೇಶಭಕ್ತಿಯನ್ನು ಒಂದು 'ಮಿತ್'ನಂತೆ ಪ್ರೇರಣೆಯನ್ನಾಗಿ ಪಡೆದುಕೊಂಡು ವೈಭವೀಕರಿಸಿರುವುದು ಗಮನಾರ್ಹ.

ಅಧ್ಯಾಯ - ೩

## ಸ್ವಾತಂತ್ರ್ಯಪೂರ್ವ ನವೋದಯ ಕವನಗಳಲ್ಲಿ ಗಾಂಧೀಜಿ ಚಿತ್ರಣ

ಸಾವಿರ ಸಾವಿರ ಸಾಮಾನ್ಯರ ನಡುವೆ ಸಾವಿರದ ಅಸಾಮಾನ್ಯರು ಎಲ್ಲೋ ಕೆಲವರು, ಆಗೊಮ್ಮೆ ಈಗೊಮ್ಮೆ ಬಂದು ಹೋಗುತ್ತಾರೆ. ಅಂಥವರು ವಿಶ್ವದಲ್ಲೇ ತಮ್ಮ ಹೆಸರು ದಾಖಲಿಸುತ್ತಾರೆ. ಮನುಕುಲದ ಚರಿತ್ರೆಯಲ್ಲಿ ಎಲ್ಲರೂ ಬುದ್ಧನ ಹಾಗೆ ಶಾಶ್ವತ ಕೀರ್ತಿಗೆ ಪಾತ್ರರೇನಾಗುವುದಿಲ್ಲ! ಎಲ್ಲರೂ ಬಸವಣ್ಣನ ಹಾಗೆ ತನ್ನತನದ ಮುದ್ರೆಯನ್ನು ಅಚ್ಚೊತ್ತಿ ಹೋಗುವುದಿಲ್ಲ! ಎಲ್ಲರೂ ಮಹಾತ್ಮರೂ ಆಗಿರುವುದಿಲ್ಲ!

ಇಡೀ ಜಗತ್ತಿನ ಜನರನ್ನು ತನ್ನ ವ್ಯಕ್ತಿತ್ವದಿಂದ ಹಾಗೂ ವಿಚಾರಧಾರೆಯಿಂದ ಸೆಳೆದ ಮಹಾನ್ ಚೇತನ. ಮೋಹನದಾಸ ಕರಮಚಂದಗಾಂಧಿ, ಅಂಥ ಅಸೀಮ ಪ್ರಭಾವದ ಅನನ್ಯ ಇರುವಿಕೆಯ ಅಪರೂಪದ ವ್ಯಕ್ತಿ ಮಹಾತ್ಮ ಗಾಂಧೀಜಿ ಅವರನ್ನು ಕನ್ನಡದ ಕವಿಗಳು. ಅದರಲ್ಲೂ ಸ್ವಾತಂತ್ರ್ಯ ಪೂರ್ವದ ನವೋದಯ ಕವಿಗಳು ಹೇಗೆ ಚಿತ್ರಿಸಿದ್ದಾರೆ ಎಂಬುದನ್ನು ದಾಖಲಿಸುವ ಸಣ್ಣ ಪ್ರಯತ್ನವೇ ಈ ಅಧ್ಯಾಯದ ಬರವಣಿಗೆಯಾಗಿದೆ.

ಸ್ವಾತಂತ್ರ್ಯಪೂರ್ವದ ಕಾಲ ಮುಖ್ಯವಾಗಿ ಸ್ವಾತಂತ್ರ್ಯೋತ್ಸಾಹದ ಕಾಲ. ಈ ಅವಧಿಯಲ್ಲಿ ಬರೆದ ಯಾರೇ ಲೇಖಕರಾಗಲಿ ಅವರು ರಾಷ್ಟ್ರೀಯ ಭಾವನೆ - ಸ್ವಾತಂತ್ರ್ಯ ಪಡೆಯುವ ಭಾವನೆಯಿಂದ ಅನ್ಯರಾಗಿ ಉಳಿಯುವುದು ಅಸಾಧ್ಯವಾಗಿತ್ತು. ಸ್ವಾತಂತ್ರ್ಯ ಪೂರ್ವದ ನವೋದಯದ ಕವಿಗಳಲ್ಲೂ ರಾಷ್ಟ್ರಪ್ರೇಮದ ಅಭಿವ್ಯಕ್ತಿಯಿತ್ತು. ಗಾಂಧಿ, ತಿಲಕ್, ಪಟೇಲ್ ಸುಭಾಷ್ ಮುಂತಾದ ಮುಂಚೂಣಿಯ ರಾಷ್ಟ್ರನಾಯಕರ ನೇತೃತ್ವದಲ್ಲಿ ಭಾರತದ ಉದ್ದಗಲಕ್ಕೂ ವ್ಯಾಪಿಸಿದ್ದ ಸ್ವಾತಂತ್ರ್ಯ ಚಳವಳಿಯು ಕನ್ನಡದ ಕವಿಗಳನ್ನು ಗಾಢವಾಗಿ ಪ್ರಭಾವಿಸಿದುದು ಆಶ್ಚರ್ಯದ ಸಂಗತಿಯೇನಲ್ಲ. ತಾಯಿಯನ್ನು ಪ್ರೀತಿಸುವುದು, ತಾಯಿನಾಡನ್ನು ಪ್ರೀತಿಸುವುದು. ನಾಗರೀಕ ಮನುಷ್ಯನಗೆ ಉಸಿರಾಡುವಷ್ಟೇ ಸಹಜವೆಂಬಂತೆ. ರಾಷ್ಟ್ರದ ದಾಸ್ಯದ ಬಿಡುಗಡೆಗೆ ಸಂಕಲ್ಪ ತೊಟ್ಟಂತಹ ಧೀಮಂತ ದೀಶಕ್ತಿಯ ಪ್ರತೀಕಗಳಾಗಿ ಸರ್ವ ಭಾರತೀಯರ ಮನದಂಗಳದಿ ವಿರಾಜಮಾನರಾಗಿದ್ದ ಅಂದಿನ ಎಲ್ಲರ ಸಚೇತಕ ಶಕ್ತಿಯಾದ ಗಾಂಧೀಜಿಯವರ ವ್ಯಕ್ತಿತ್ವ ಆರಂಭದ ಕನ್ನಡ ಕವಿಗಳಿಗೆ ಹೇಗೆ ಗೋಚರಿಸಿರಬಹುದು. ಅದರಿಂದ ಪ್ರಭಾವಿತರಾದ ಅಸಂಖ್ಯಾತ ಕನ್ನಡ ಕವಿಗಳು ಅವರನ್ನು ಸ್ವಾತಂತ್ರ್ಯ ಪೂರ್ವದಲ್ಲಿ ಹೇಗೆ ಚಿತ್ರಿಸಿರಬಹುದು ಎಂಬ ವಿಚಾರಗಳನ್ನು ಈ ಅಧ್ಯಾಯದಲ್ಲಿ ವಿವರಿಸುವ ಪ್ರಯತ್ನ ಮಾಡಲಾಗಿದೆ. ಅಲ್ಲದೇ ಅವರ ವ್ಯಕ್ತಿತ್ವದ ಅನಾವರಣವನ್ನು ಹೇಗೆ ಹಲವು

ಬಗೆಗಳಲ್ಲಿ ಮಾಡಿರಬಹುದು.ಎಂಬುದನ್ನು ತಿಳಿಯಬಹುದಾಗಿದೆ. ಗಾಂಧೀ ಮಹಾತ್ಮನ ವ್ಯಕ್ತಿತ್ವದ ಅವಲೋಕನವೇ ಕನ್ನಡ ನವೋದಯ ಕಾವ್ಯದಲ್ಲಿ ಹೆಪ್ಪುಗಟ್ಟಿದೆ. ಗಾಂಧೀಜಿಯವರನ್ನು ಕುರಿತು ಬರೆಯದ ರಮ್ಯ ಕವಿಯೇ ಇಲ್ಲವೇನೋ! ಎನ್ನುವಷ್ಟರ ಮಟ್ಟಿಗೆ ಗಾಂಧೀಜಿಯವರ ವ್ಯಕ್ತಿತ್ವ ಕನ್ನಡ ಕವಿಗಳನ್ನು ಪ್ರಭಾವಿಸಿದೆ. ಸ್ವಾತಂತ್ರ್ಯಪೂರ್ವ ಕಾಲಘಟ್ಟದಲ್ಲಿ ನವೋದಯ ಕವಿಗಳಾದ ಗೋವಿಂದ ಪೈ, ಡಿ.ವಿ.ಜಿ., ಮಾಸ್ತಿ, ಪು.ತಿ.ನ., ಸಾಲಿ ರಾಮಚಂದ್ರರಾಯರು, ಪಂಜೆ ,ಬೇಂದ್ರೆ, ಆನಂದಕಂದ, ಬೆಳಗೆರೆ ಜಾನಕಮ್ಮ, ಕುವೆಂಪು ಮುಂತಾದ ಕವಿಗಳ ಕಾವ್ಯಕ್ಕೆ ಗಾಂಧೀಜಿ ಪ್ರೇರಕ ಶಕ್ತಿಯಾಗಿರುವುದರಲ್ಲಿ ಆಶ್ಚರ್ಯವೇನಿಲ್ಲ.

ಸರಳ ವ್ಯಕ್ತಿತ್ವ, ಕಡ್ಡಿಯಂಥ ಮೈ, ಬೋಳುತಲೆ, ಅಗಲ ಕಿವಿ, ಚಾಳೀಸು ಹುಟ್ಟುನಗೆ, ಅರೆಬೆತ್ತಲ ಫಕೀರನಂತೆ ಪೋಷಾಕು, ಕನ್ನಡಿ ಹರಳಿನಂಥ ನೇರಮಾತು, ನೇರ ನಡೆ, ಅಂತರಂಗದ ಧ್ವನಿ ಅಂತ ಹೇಳಿ ಅದನ್ನೇ ಸಾರ್ವಜನಿಕ ಅಭಿಪ್ರಾಯವಾಗಿ ಮಾರ್ಪಡಿಸಬಲ್ಲ ಮೋಡಿಗಾರ. ಉಪವಾಸ, ಗಿಪವಾಸ ಅಂತ ಹಟಕ್ಕೆ ಬಿದ್ದು ತನ್ನದನ್ನು ಸಾಧಿಸಿಕೊಳ್ಳಬಲ್ಲ ಛಲಗಾರ. ಹೀಗೆ ಗಾಂಧೀಯವರ ಹಲವು ಬಗೆಯ ವ್ಯಕ್ತಿತ್ವಗಳು ಕನ್ನಡ ಕವಿಗಳ ಕವನಗಳಲ್ಲಿ ದಾಖಲಾಗಿವೆ. ಸ್ವಾತಂತ್ರ್ಯ ಪೂರ್ವದಲ್ಲಿ ಕೆಲವರಿಗೆ ಗಾಂಧೀಜಿ, ಆದರ್ಶದ ಪ್ರತೀಕವಾದರೆ ಮತ್ತೆ ಕೆಲವರಿಗೆ ಚೇತನದ ಚಿಲುಮೆ. ಕೆಲವರಿಗೆ ಆರಾಧನಾ ಭಾವದ ಸಂಕೇತವಾದರೆ ಕೆಲವರಿಗೆ ಸ್ವಾತಂತ್ರ್ಯ ಪುರುಷ, ಹಲವರಿಗೆ ಮೌಲ್ಯಗಳ ಗಣಿಯಾದರೆ, ಮತ್ತಲವರಿಗೆ ಸಮಾನತೆಯ ಹರಿಕಾರರಾಗಿ ಗಾಂಧೀ ಗೋಚರಿಸಿದ್ದಾರೆ.

ಗಾಂಧೀಜಿಯವರ ಪ್ರಭಾವಕ್ಕೆ ಒಳಗಾದ ನವೋದಯದ ಆರಂಭದ ಅಥವಾ ಸ್ವಾತಂತ್ರ್ಯಪೂರ್ವ ನವೋದಯ ಕವಿಗಳಲ್ಲಿ ಪೇಜಾವರ ಸದಾಶಿವರಾಯರು ಒಬ್ಬರು. ಅವರು ತಮ್ಮ ಕವನದಲ್ಲಿ ಗಾಂಧೀಜಿಯವರನ್ನು ಸ್ವಾತಂತ್ರ್ಯ ಭೈರವನಾಗಿ ಚಿತ್ರಿಸಿದ್ದಾರೆ. ಗಾಂಧೀಜಿಯವರು ಸ್ವಾತಂತ್ರ್ಯ ಸಂಗ್ರಾಮದ ಚುಕ್ಕಾಣಿ ಹಿಡಿದ ದಿನಗಳಲ್ಲಿ ಬರೆದಂತೆ ಕಾಣುವ ಈ ಕವನದಲ್ಲಿ ಗಾಂಧೀಜಿಯವರ ನೋಟ, ನಡೆ, ಮಾತು ಮುಂತಾದವುಗಳ ತೀವ್ರತೆಯನ್ನು ಅದ್ಭುತವಾಗಿ ಕವಿ ಎಳೆ ಎಳೆಯಾಗಿ ಬಿಡಿಸಿಟ್ಟಿದ್ದಾರೆ.

ನಿನ್ನ ಗುಡುಗಿನ ನಡೆಗೆ ಧರೆಯು ಬಿರಿಯುವುದು
ನಿನ್ನ ತಂಬಟೆ ಸರಕೆ ದಾಸ್ಯ ಹರಿಯುವುದು
ಸ್ವಾತಂತ್ರ್ಯ ಭೈರವನೆ ನಿನ್ನಮರ ಕರೆಗೆ
ಮಾಂತ್ರಿಕರ ಮತವು ತಲೆವಾಗುವುದು ಕೆಳಗೆ

(ಮರೆಯಲಾಗದ ಬರಹಗಾರರು – ಪೇಜಾವರ ಸದಾಶಿವರಾಯ – ಸಾಹಿತ್ಯವಾಚಿಕೆ, ಪುಟ. ೩೧)

ಎಂದೆಲ್ಲಾ ಗಾಂಧೀಜಿಯವರನ್ನು ಚಿತ್ರಿಸಿದ ಕವಿ ಮನ ಮುಂದುವರಿದು

ಬಂಧನದ ಬಲೆ ಹರಿವ ಆಯುಧವ ತಾರ
ದಾಸ್ಯಬೇಡಿಯ ಮುರಿವ ಭೈರವನೆ ಬಾರ ।

(ಮರೆಯಲಾಗದ ಬರಹಗಾರರು – ಪೇಜಾವರ ಸದಾಶಿವರಾಯ – ಸಾಹಿತ್ಯವಾಚಿಕೆ, ಪುಟ. ೩೧)

ಎಂದು ತಮ್ಮ **'ಸ್ವಾತಂತ್ರ್ಯ ಭೈರವ'** ಕವನದಲ್ಲಿ ಗಾಂಧೀಜಿ ಚಿತ್ರಣವನ್ನು ಕಟ್ಟಿಕೊಟ್ಟಿದ್ದಾರೆ.

ಗಾಂಧೀಜಿಯವರು ಯಾವುದೇ ನಿಶ್ಚಿತ ಸಿದ್ಧಾಂತಕ್ಕೆ ಬದ್ಧರಾಗದೆ ಚಿಂತನೆ ಮತ್ತು ಕ್ರಿಯೆಗಳಲ್ಲಿ ಸತತ ಪ್ರಯೋಗಗಳನ್ನು ನಡೆಸುತ್ತ ಸಾಗಿದ ಸತ್ಯಶೋಧಕರೆಂದು ಡಿ.ವಿ.ಜಿ. ಅವರು ಅವರ ಚಿಂತನೆಗಳನ್ನು ಕುರಿತು ವಿವರಿಸಿದ್ದಾರೆ. ಮಾನವ ಸಮುದಾಯದಲ್ಲಿನ 'ದ್ವೇಷ' ಹಿಂಸೆಗಳನ್ನು ಪ್ರೇಮ ಹಾಗೂ ಅಹಿಂಸೆಗಳಿಂದ ಗೆಲ್ಲಬೇಕು ಎಂಬಂತಹ ವ್ಯಕ್ತಿತ್ವ ಗಾಂಧೀಜಿಯವರದಾಗಿತ್ತು ಎಂಬ ಅಂಶವನ್ನು ಅವರ **'ಸಾಧುಗಾಂಧಿ'** ಕವನದಲ್ಲಿ ಎಳೆಎಳೆಯಾಗಿ ಬಿಡಿಸಿದ್ದಾರೆ.

ಇಂದ್ರಿಯಂಗಳ ಜಯಿಸಿ ಚಿತ್ತ ಶುದ್ಧಿಯ ಬಯಸಿ
ಲೋಭಮಂ ತ್ಯಜಿಸಿ ರೋಷವ ವರ್ಜಿಸಿ
ಸರ್ವಸಖ್ಯವ ಭಜಿಸಿ ತೃಪ್ತತೆಯಭ್ಯಸಿಸಿ
ಸತ್ಯಪಾಲನೆಯೊಂದ ಮನದೊಳಿರಿಸಿ!
ಕಾಯ ಕಷ್ಟವ ಸಹಿಸಿ ವೈರಿಗಣಮಂ ಕ್ಷಮಿಸಿ
ಸರ್ವಸಮತೆಯ ಗಳಿಸಿ ಶಮವನರಸಿ
ಸ್ವಾತ್ಮ ಶಿಕ್ಷಣಮೇ ಸ್ವರಾಜ್ಯ ಮೆನ್ನುತ ವಚಿಸಿ
ದೇಶಸೇವೆಯನೀಶ ಸೇವೆಯೆನಿಸಿ ॥
ಸಾಧುವರ ವೃತ್ತಿಯಂ ತನ್ನೊಳೆ ಜಗಕೆ ತೋರಿ ।
ಐಹಿಕಾರ್ಥಗಳಾರ್ಥ್ಯಮಂ ವಿಶದ ಬಡಿಸಿ
ಪಾಶ್ಚಾತ್ಯ ಜನಕಮತಿ ವಿಮಲ ನೀತಿಯನು ಪೇಳ್ವಾ ।
ದೈವ ಸಂಪನ್ಮಾರ್ಗದರ್ಶಕಂ ಗಾಂಧಿಯಷ್ಟೇ ॥

(ಗಾಂಧಿ ಎಂಬ ಹೆಸರು, ಪುಟ. ೬೦)

ಎಂದು ಅವರ ವ್ಯಕ್ತಿತ್ವದ ಸಂಪೂರ್ಣ ಚಿತ್ರಣವನ್ನೇ ಡಿ.ವಿ.ಜಿ. ಇಲ್ಲಿ ಚಿತ್ರಿಸಿದ್ದಾರೆ. ಗಾಂಧೀಜಿಯವರಿಗೆ ಸತ್ಯ ಮತ್ತು ದೇವರು ಎರಡೂ ಒಂದೇ, ಜೊತೆಗೆ ಸರ್ವರ ಉದಯವನು ಬಯಸಿದ ಮಹಾಮಹಿಮರು ಗಾಂಧೀಜಿ. ಉದಾತ್ತ ಚಿಂತನೆಯ ಸಾಕಾರ ಮೂರ್ತಿ, ದೇಶಸೇವೆಯೇ ಈಶಸೇವೆಯೆನಿಸಿ ಬದುಕಿದವರು ತಮ್ಮ ಜೀವನವನ್ನೇ ಸಂದೇಶವಾಗಿಸಿದವರು ಇತ್ಯಾದಿಯಾಗಿ ಅವರ ವ್ಯಕ್ತಿತ್ವವನ್ನು ಹಿರಿಯ ಕವಿಯ ಭಾವ ಚಿತ್ರಿಸಿದೆ. ಬಲವನ್ನೆ ಬಳಸುವುದು

ದುಷ್ಟತನ; ನ್ಯಾಯವನ್ನು ಪಡೆಯಲೂ ಅದರ ಬಳಕೆಯನ್ನು ನಿಷೇದಿಸಬೇಕೆಂಬುದು ಅವರ ನಿಶ್ಚಲ ನಂಬಿಕೆಯಾಗಿತ್ತು. ಈ ನಂಬಿಕೆಗೆ ಅವರು ತಮ್ಮ ಸಂಪೂರ್ಣ ಬದುಕನ್ನು ಅರ್ಪಿಸಿಕೊಂಡರು. ತಮ್ಮ ಹೃದಯ ಮತ್ತು ಆತ್ಮದಲ್ಲಿ ಈ ನಂಬಿಕೆಯನ್ನಿರಿಸಿಕೊಂಡರು ಗಾಂಧೀಜಿ. ಈ ಮೂಲಕ ಅವರು ಬೃಹತ್ ಭಾರತವನ್ನು ವಿಮೋಚನೆಯೆಡೆಗೆ ಮುನ್ನಡೆಸಿದವರು. ಈ ನಿಲುವುಗಳ ಸಾಕಾರ ರೂಪವಾಗಿ ಬಾಳಿ ಬದುಕಿದವರು ಗಾಂಧೀಜಿ ಎಂದು ಗಾಂಧೀಜಿಯವರ ವ್ಯಕ್ತಿತ್ವದ ದರ್ಶನ ಮಾಡಿಸುತ್ತದೆ. ಮಾಸ್ತಿಯವರ **"ಗಾಂಧೀಜಿಯವರ ದರ್ಶನ"** ಕವನ

'ಎಳೆಯ ಮಗುವಿನ ಮೊಗದ
ನಗೆಯಿಹುದು ಮೊಗದೆ.
ಇಳೆಯರಸರಿಗೆ ಬರದ
ಬಗೆಯ ಗಾಂಭೀರ್ಯ' (ಗಾಂಧಿ ಎಂಬ ಹೆಸರು, ಪುಟ. ೦೭)

ಗಾಂಧೀಯವರು ಎಳೆಯ ಮಗುವಿನ ಹಾಗೆ. ಮುಗ್ಧ ಮುಖ ಅಲ್ಲೊಂದು ಮಕ್ಕಳ ನಗೆ. ಆದರೆ ಭರತಖಂಡದ ಅರಸರಿಗಿಲ್ಲದ ಗಾಂಭೀರ್ಯ ಇವರಿಗೆ ಎನ್ನುವ ಮಾಸ್ತಿಯವರು.

ಇವನ ಧರಿಸಿದ ಭೂಮಿ
ಪುಣ್ಯಭೂಮಿ. ಇದು
ಇವನ ನೋಡಿದ ನಾವು
ಧನ್ಯರಾವಿಂದು (ಗಾಂಧಿ ಎಂಬ ಹೆಸರು, ಪುಟ. ೦೮)

ಮಾತ್ರದೇ ತನ್ನೆಡೆಗೆ ಸೆಳೆಯುವ ವ್ಯಕ್ತಿತ್ವ ಗಾಂಧೀಜಿಯದು ಎಂದು ಈ ಕವನದಲ್ಲಿ ವರ್ಣಿಸಿದ್ದಾರೆ.

ಕನ್ನಡ ನಾಡಿನ ಸಂತಕವಿಯೆಂದೇ ಖ್ಯಾತರಾದ ಪು.ತಿ.ನ. ಅವರೂ ಕೂಡ ಗಾಂಧೀಜಿಯವರನ್ನು ಕುರಿತು ಕವನಗಳನ್ನು ರಚಿಸಿದ್ದಾರೆ. ಗಾಂಧೀಜಿಯವರ ನೇರ ಪ್ರಭಾವ ವಲಯದಲ್ಲಿ ಇರದಿದ್ದರೂ ಗಾಂಧೀ ತತ್ವಗಳಿಂದ ನಡೆ – ನುಡಿಗಳಿಂದ ಪ್ರಭಾವಿತರಾದ ಅವರು ತಮ್ಮ **'ಗಾಂಧೀಸ್ತವ'** ಕವನದಲ್ಲಿ ಗಾಂಧಿಯನ್ನು ಸಾಮಾಜಿಕ ಸುಧಾರಕನೆಂಬಂತೆ ಚಿತ್ರಿಸದೆ, ಹೊಗಳಿಕೆಗೂ ಮಿಗಿಲಾದ ವ್ಯಕ್ತಿತ್ವ ಗಾಂಧೀಜಯವರದು ಎಂದು ಕವಿಮನ ಚಿತ್ರಿಸಿದೆ.

ಹೊಗಳಲೆ ಹರಿಜನ ಶಾಪ ವಿಮೋಚನ ಕಾರ್ಯವ
ಹೊಗಳಲೆ ನಾಡಿನ ನೈಚ್ಯವನಳಿಸಿದ ಕಾರ್ಯವ

ಹೊಗಳಲೆ ನರಪಶೂ ಮಾನವನೆನಿಸಿದ ಕಾರ್ಯವ
ಹೊಗಳಿಕೆಗೂ ಮಿಗಿಲೀತನ ಕಲ್ಯಾಣಕೃತಿ (ಗಾಂಧಿ ಎಂಬ ಹೆಸರು, ಪುಟ. ೧೦)

ಎಂಬುದಾಗಿ ಮಹಾತ್ಮನ ನಾನಾ ಕಲ್ಯಾಣಕಾರ್ಯಗಳನ್ನು ಸಾಧಿಸಿದ ವ್ಯಕ್ತಿತ್ವದ ವ್ಯಕ್ತಿಯಾಗಿ ಗಾಂಧೀಜಿಯವರನ್ನು ಚಿತ್ರಿಸಿದ್ದಾರೆ.

ಗಾಂಧಿಯವರು ಹಿಂದುಸ್ಥಾನದ ಜನಕ್ಕೆ ಒಂದು ಸಮ್ಮೋಹನ ಮಂತ್ರ. ಅವರ ಹಾಗೆ ಹಿಂದೂಸ್ಥಾನದ ಹಳ್ಳಿಗಳನ್ನು ತಿರುಗಿದವರು ಯಾರೂ ಇಲ್ಲ. ಕೋಟಿ ಗುಡಿಸಲಲ್ಲಿ ಅವರ ಚಿತ್ರ ಇದೆ. ಕೋಟಿ ಬಾಯಿಂದ ಮಹಾತ್ಮಾ ಗಾಂಧೀಕಿ ಜೈ ಎಂಬ ಹರಕೆ ಸದಾ ಕೇಳಿಸುತ್ತದೆ. ಹೀಗೆ ಗಾಂಧೀಜಿಯವರನ್ನು ಸಾಲಿ ರಾಮಚಂದ್ರರಾಯರ **'ಆಶ್ಚರ್ಯದದ್ಭುತವು'** ಕವನ ಗಾಂಧೀಜಿಯ ಚಿತ್ರಣವನ್ನು ಕಟ್ಟಿಕೊಡುತ್ತದೆ.

ಆಶ್ಚರ್ಯದದ್ಭುತವು ಧರೆಗೊಳಾಯ್ತು
ನಿಶ್ಚೇಷ್ಟ ಜೀವನವು ಸಿಡಿದೆದ್ದಿತು ॥

ಜ್ಯೋತಿ ಜನಗಣಮಧ್ಯದಿಂದುದಯಿಸಿತು ಪರಂ
ಜ್ಯೋತಿ ಅವತರಿಸಿತೀ ಭಾರತದಲಿ
ಚೇತರಿಸುತರಿತು ಬೆಳಕಿನೇಳಾತ್ಮ ಬಲವನಿ
ನ್ನೇತರದು ಭಯವೆಂದು ಜನವೆದ್ದಿತು (ಗಾಂಧಿ ಎಂಬುವ ಹೆಸರು, ಪುಟ. ೧೨)

ಹಿಂಸೆಯನ್ನು ಪ್ರಯೋಗಿಸದೆ ಮಾಡಿದ ಕ್ರಾಂತಿ ವಿಧಾನದ ಮೂಲಕ ಗಾಂಧೀಜಿಯವರು ಜನಮಾನಸದಲ್ಲಿ ಮಹಾತ್ಮರಾದ ಬಗೆಯನ್ನು ಆನಂದಕಂದರ **'ಮಹಾತ್ಮನಿಗೆ'** ಕವನ ವಿವರಿಸುತ್ತದೆ. ಸಹಜಯೋಗಿಯಾದ ಗಾಂಧೀಜಿಯವರು ಸ್ನೇಹ, ಪ್ರೀತಿ, ವಿಶ್ವಾಸಗಳ ಗಣಿಯಾಗಿ ಕವಿಗೆ ಗೋಚರಿಸಿದ್ದಾರೆ. ಬರಡಾದ ನೆಲಕೆ ಪನ್ನೀರು ಒದಗಿದಂತೆ ಈ ನಾಡಿನ ಜನರ ಬರಡು ಮನಕೆ ಪನ್ನೀರಾಗುವ ಮೂಲಕ ಚೈತನ್ಯವ ಬಿತ್ತಿದ ಮಹಾಚೇತನವೆಂದು ಕವಿ ಗಾಂಧೀಜಿಯವರನ್ನು ಚಿತ್ರಿಸುತ್ತಾರೆ.

ನಿನ್ನ ಉಸಿರದೊಂದೊಂದು ಜಡಕೆ ಜೀವವಿತ್ತಿತೊ
ನಿನ್ನ ಧಮನಿಮಿಡಿತವಹಹ ಚೈತನ್ಯವ ಬಿತ್ತಿತೊ
ನಿನ್ನ ವಾಣಿ ದಿಗ್‌ದೇಶಕೆ ನನ್ನಿಯನೆಲೆ ತಿಳುಹಿತೊ,
ನಿನ್ನ ಗೆಯ್ಮೆ ಸಾವಜೀವಜಂಗುಳಿಯನ್ನುಳುಹಿತೊ . . . .
(ಗಾಂಧಿ ಎಂಬ ಹೆಸರು, ಪುಟ. ೧೪)

ಎನ್ನುವ ಕವಿ ಮುಂದುವರಿದು

ಮೈತ್ರಿಯಿಂದೆ ಶತ್ರುಗಳನು ಸೋಲಿಸಿರುವ ವೀರ
ಮೃತ್ಯುವನೂ ಮಿತ್ರನಂತೆ ಸ್ವಾಗತಿಸಿದ ಧೀರ
ನಿನ್ನ ನೌಕೆ ನಂಬಿದರನು ತಲ್ಪಿಸಿತ್ತೈ ತೀರ
ನೀನು ನಡೆದ ದಾರಿಯದೇ ಸತ್ಯ ಧರ್ಮಸಾರ
ನವನವಿದೋ, ನಮನವಿದೋ, ನಮನ ಸಹಜಯೋಗಿ

(ಗಾಂಧಿ ಎಂಬ ಹೆಸರು, ಪುಟ. ೧೫)

ಎಂದು ಗಾಂಧೀಜಿಯವರ ಸ್ವಭಾವದ ನೇರ ಚಿತ್ರಣವನ್ನು ದಾಖಲಿಸುತ್ತಾರೆ.

ಬೇಂದ್ರೆಯವರು **ಜಯ ಜಯಾ ಗಾಂಧೀ ಮೋಹನಾ** ಎಂಬ ಕವನದಲ್ಲಿ ಗಾಂಧೀಜಿಯವರ ವ್ಯಕ್ತಿತ್ವದ ಮುಖ್ಯ ಲಕ್ಷಣವನ್ನು ಈ ರೀತಿ ಚಿತ್ರಿಸುತ್ತಾರೆ.

ನೆನಸೇವು ನಿನ್ನ ಆ ನಗೇ
ಒಳಗೆ ಇಲ್ಲ ಧಗಿ
ಬರೇ ಬೆಳಕು – ಬರೇ ಬೆಳಕು
ನಿಂ – ಮಾತು ಮಿಂಚಿನ್ಽಗರಿ
ನಿಮ್ಮ ಹೃದಯದಾಗ ಇಲ್ಲ ಪಾಪ. (ಬಾಪು ಕಾವ್ಯಾಂಜಲಿ, ಪುಟ. ೨೭)

ಗಾಂಧೀಜಿಯವರ ಸಹಾನುಭೂತಿಯ ಸಾರ್ವತ್ರಿಕತೆಯನ್ನು **"ಬಾಪೂಜಿಗೆ"** ಕವನದಲ್ಲಿ ಒಂದೇ ವಾಕ್ಯದಲ್ಲಿ ಕವಿ ಅರ್ಚಿಕ ವೆಂಕಟೇಶರು ಹೀಗೆ ಬಣ್ಣಿಸಿದ್ದಾರೆ.

ಜಗದಗಲ ಮುಗಿಲಗಲ
ನಿನ್ನ ಮನ ಭಾವನಾ (ಅಮರನಾದೈ ತಂದೆ, ಪುಟ. ೬೧)

ಕಯ್ಯಾರ ಕಿಞ್ಞಣ್ಣ ರೈ ಪ್ರಶ್ನಿಸುತ್ತಾರೆ. ತಮ್ಮ **ಗಾಂಧಿ ಗಾಥಾ** ಕವನದಲ್ಲಿ

ಎನಿತು ಶತಮಾನಗಳ ನಿಶ್ಚಲ ತಪೋನಿಷ್ಟ
ಫಲಿಸಿತೊ, ಭಾರತಿಯ ಸೌಭಾಗ್ಯ ಬೆಳಗಿತೋ
ಸತ್ಯ ನಿರ್ಮಲ ಶಾಂತಮೂರ್ತಿ! ನಿಮ್ಮ
ಪುಣ್ಯ ಜನ್ಮೋದಯದ ಮಂಗಳೋತ್ಸವದಂದು

(ಗಾಂಧಿ ಎಂಬ ಹೆಸರು, ಪುಟ. ೧೦೭)

ಭಾರತದ ಭಾಗ್ಯವೇ ಜನಿಸಿ ಭಾರತಾಂಬೆಯ ದಾಸ್ಯ ಕಳೆಯಲು ಉದಯಿಸಿತು ಎಂದು ಗಾಂಧೀಜಿಯವರನ್ನು ಸ್ಮರಿಸಿದ್ದಾರೆ. ಸಮಾಜಕ್ಕೆ ಸಂಪೂರ್ಣವಾಗಿ ಹೊಸ ರೂಪವನ್ನೀಯಬೇಕೆಂಬುದೇ

ಗಾಂಧೀಜಿಯವರ ಗುರಿಯಾಗಿತ್ತು. ಅಂಥ ಮಹಾನ್ ವ್ಯಕ್ತಿತ್ವದ ಗಾಂಧೀಜಿಯವರನ್ನು ಕುರಿತು ಮಹಾಕವಿ ಕುವೆಂಪು ಅವರು ೧೯೨೭ರಲ್ಲಿ **'ಮಹಾತ್ಮ ಗಾಂಧಿ'** ಎಂಬ ಕವಿತೆಯನ್ನು ರಚಿಸಿದ್ದಾರೆ. ಒಟ್ಟು ೩೩ ಸಾಲುಗಳಿರುವ ೩ ಪದ್ಯಗಳಲ್ಲಿ ಚಾಚಿರುವ ಈ ಕವನ ಮಹಾತ್ಮಗಾಂಧಿಯವರನ್ನು ಭಾರತೀಯರ ಕೀರ್ತಿ, ಕರ್ಮಯೋಗದ ಸಿದ್ಧ, ಕಲಿಯುಗದ ಬುದ್ಧ, ಅಹಿಂಸಾಶೀಲ, ಖಾದಿ ಚರಕದ ಲೋಲ, ಭರತಖಂಡದ ಜ್ಯೋತಿ ಎಂದೆಲ್ಲಾ ಅವರನ್ನು ಹೊಗಳಿ ಚಿತ್ರಿಸುತ್ತದೆ.

ಶ್ರೀ ಮಹಾತ್ಮಾ ಗಾಂಧಿಯೆ
ಕೀರ್ತಿದೇವಿಯ ಬಂದಿಯೆ
ಭರತನೆಲದಭ್ಯುದಯ ಸೂತ್ರದ,
ಹಿಡಿದ ಧರ್ಮದ ಮೂರ್ತಿಯೆ;
ಭಾರತೀಯರ ಕೀರ್ತಿಯೆ
ಕರ್ಮಯೋಗದ ಸಿದ್ದನು
ನೀನು ಕಲಿಯುಗ ಬುದ್ಧನು!
ನಿನ್ನ ಕರುಣೆಯ ಸರಿಯು ಸುರಿಯಲಿ
ಭೇದಗಳನದ ಕೊಚ್ಚಿ ಹರಿಯಲಿ!
ಮಂಗಳದ ಮಳೆ ಕರೆಯಲಿ!
ರಂಗ ನಿನ್ನನು ಪೊರೆಯಲಿ! (ನೆನಪಿನ ದೋಣಿಯಲ್ಲಿ, ಪುಟ. ೭೫೫)

ಎಂದೆಲ್ಲಾ ಕವಿ ಮನಸ್ಸು ಗಾಂಧೀಜಿಯವರನ್ನು ಹಲವು ಗುಣಾವಶೇಷಗಳಿಂದ ಚಿತ್ರಿಸಿ ಸಂತೃಪ್ತಿಪಟ್ಟಿದೆ.ಗಾಂಧೀಜಿಯಲ್ಲಿ ದೈವತ್ವವನ್ನು ಕಾಣುವ ಕವಿ ಕುವೆಂಪು ಅಂಥ ದೇವತ್ವದ ಸ್ವರೂಪ ಲಕ್ಷಣಗಳನ್ನು ವಿಶದವಾಗಿ ವಿವರಿಸುತ್ತಾರೆ.

ಮನುಜರಲಿ ದೇವತ್ವದಾಕಾಂಕ್ಷೆಯಳಿದಿಲ್ಲ
ಉಳಿದಿಹುದು ; ದಿನದಿನಕೆ ಬೆಳೆಯುತಿದೆ; ಎಂಬುದಕೆ
ಸಾಕ್ಷಿಯಿದು;ದಶದಶಸಹಸ್ರ ಜನಕಿಕ್ಕಿರಿದು
ನೆರೆದಿಹುದು ಬಿಸಿಲಿನಲಿ ಮಾನವ ಮಹಾತ್ಮನಿಗೆ
ಗೌರವಾರಾಧನೆಯ ನೈವೇದ್ಯವನುಸಲಿಸೆ (ಬಾಪು ಕಾವ್ಯಾಂಜಲಿ, ಪುಟ. ೪೩)

ಗಾಂಧೀಜಿಯಲ್ಲಿ ದೈವತ್ವದ ಕಲ್ಪನೆ ಇಲ್ಲದವರು ಕಲ್ಪನಾ ವ್ಯಕ್ತಿಯೊಬ್ಬನ ಸುತ್ತ ಪವಾಡಗಳ ಬಲೆಯನ್ನು ನೆಯ್ದು, ಜನರ ಅಜ್ಞಾನವನ್ನು ಬಂಡವಾಳ ಮಾಡಿಕೊಂಡು, ಅವರನ್ನು ಶೋಷಿಸುತ್ತಾರೆ. ರಾಜಕೀಯಕ್ಕೆ ಬಳಸಿಕೊಳ್ಳುತ್ತಾರೆ. ದೇವರ ಹೆಸರಿನಲ್ಲಿ ಜನರನ್ನು ವಂಚಿಸುತ್ತಾರೆ. ಆದರೆ ನಿಜವಾದ ದೇವತಾ ಸ್ವರೂಪಿಯಾದ ಗಾಂಧೀಜಿಗೆ ಸರಳ ಜೀವನದ ದೇವತ್ವದಾರಾಧನೆಗೆ

ಜನರನ್ನೆಚ್ಚರಿಸುವುದೇ ಗಾಂಧೀಜಿಯ ಸಕಲ ಪ್ರಯತ್ನಗಳ ಉದ್ದೇಶ ಎಂದು ಕವಿ ಕುವೆಂಪು ತಮ್ಮ **"ಸಭತ್ಯಾದೇವತೆ "** ಕವನದಲ್ಲಿ ಚಿತ್ರಿಸುತ್ತಾರೆ.

ಮುಂದುವರಿದು ಜಗತ್ತಿನ ಎಲ್ಲೆಡೆಯಲ್ಲಿಯೂ ಮಾನವ ದಾನವನಂತೆ ವರ್ತಿಸುವ ಸಂದರ್ಭದಲ್ಲಿ ಬುದ್ಧ, ಕ್ರಿಸ್ತ, ಗಾಂಧಿಯಂಥವರು ತ್ಯಾಗ ತಪಸ್ಸುಗಳ ಮೂಲಕ ಜನರನ್ನು ನೈತಿಕತೆಯ ಕಡೆಗೆ ಆಕರ್ಷಿಸುತ್ತಿರುವುದಲ್ಲದೆ, ಎಲ್ಲೆಲ್ಲೂ ದೈವೀಪ್ರಜ್ಞೆಯ ಬೆಳಕನ್ನು ಚಿಮ್ಮಿಸುತ್ತಾರೆ.

. . . . . . ಮಾನವನ ಅಭ್ಯುದಯ
ಶ್ರೇಯಸ್ಸುಗಳಿಗಾಗಿ ನೊಂದವರ್, ಬೆಂದವರ್
ಮನುಜರಂತೆಯೆ ಬಾಳಿ ಹೋರಾಡಿ ಸಂದವರ್,
ರಾಜ್ಯ ಭೋಗ ತ್ಯಾಗದಮಲ ವೈರಾಗಿಗಳ್,
ಮನುಜತನುಜರ್ ಇಂದು ಕ್ರಿಸ್ತ ಬುದ್ಧಾದಿಗಳೆ
ಮಾನವರ ಪೂಜೆ ಗೌರವಗಳನು ಕೈಕೊಳ್ವ
ದೇವತೆಗಳಾಗುವ ಕಾಲವೈ ತಂದಿಹುದು (ಬಾಪು ಕಾವ್ಯಾಂಜಲಿ, ಪುಟ. ೪೫)

ಎನ್ನುತ್ತಲೇ ಹೌದು, ಹಳೆಯ ದೇವತೆಗಳ ಕೆಲಸ ಮುಗಿದಿದೆ. ಅವರೀಗ ಕಲ್ಲಾಗಿ ಬಣ್ಣದ ಬೊಂಬೆಗಳಾಗಿ ಮ್ಯೂಸಿಯಂ ಸರಕುಗಳಾಗಿವೆ. ಸತ್ತ ಕಲ್ಗಳ ಮುಂದೆ ಅತ್ತು ಕರೆದು ಸಾಕಾಗಿದೆ. ಜಗತ್ತಿನ ಜೀವ ಜಾಲದ ಕ್ಷೇಮಕ್ಕಾಗಿ ತಮ್ಮನ್ನು ತೆತ್ತುಕೊಂಡಿರುವ ಗಾಂಧಿಯವರೇ ನಮ್ಮ ದೇವರು.

ಋಜು ದೃಷ್ಟಿ ದೊರೆ ಕೊಳಲ್ ಮೂರು ಯುಗಗಳ್ ಕಳೆದು
ಕಲಿಕಾಲ ಬೇಕಾಯ್ತು! ಧನ್ಯ, ಕಲಿಯು ಧನ್ಯ
(ಬಾಪು ಕಾವ್ಯಾಂಜಲಿ, ಪುಟ. ೪೫)

ಎಂದು ಕವಿ ಕೃತಜ್ಞತೆಯಿಂದ ಭಾವುಕರಾಗುತ್ತಾರೆ. ಮಾನವನ ಅಭ್ಯುದಯ ಶ್ರೇಯಸ್ಸುಗಳಿಗಾಗಿ ನೊಂದವರು, ಬೆಂದವರು, ಮನುಜರಂತೆಯೇ ಬಾಳಿ ಹೋರಾಡಿ ಸಂದವರು, ವೈರಾಗಿಗಳು ಮಾತ್ರ ವಿಜ್ಞಾನಯುಗದಲ್ಲಿ ಆರಾಧ್ಯರಾಗುತ್ತಾರೆ.

ಮನುಜ ತನುಜರಾದ ಇವರೂ ಕ್ರಿಸ್ತಬುದ್ಧರಂತೆ ಮಾನವರ ಪೂಜೆ, ಗೌರವಗಳಿಗೆ ಪಾತ್ರರಾಗುತ್ತಾರೆ. ೧೯೩೪ರ ಹೊತ್ತಿಗಾಗಲೇ ಗಾಂಧೀಜಿ ಭಾರತೀಯರ ಹೃದಯ ಸಿಂಹಾಸನದಲ್ಲಿ ಆಸೀನರಾಗಿದ್ದರೆಂಬುದಕ್ಕೆ ಈ ಕವಿತೆಯೇ ಸಾಕ್ಷಿಯಾಗಿದೆ.

ಸತ್ಯಾಗ್ರಹ ಸಿದ್ಧಾಂತದ ಸ್ವರೂಪ ಲಕ್ಷಣ ದರ್ಶನ ತಂತ್ರ ಮತ್ತು ಪ್ರಾಯೋಗಿಕ ವಿಧಾನಗಳನ್ನು ಗಾಂಧೀ ಜೀವನದ ಘಟನೆಗಳನ್ನು ಆಧಾರವಾಗಿಟ್ಟುಕೊಂಡು **'ಸತ್ಯಾಗ್ರಹಿ'** ಎಂಬ ಕವಿತೆಯಲ್ಲಿ

ಕುವೆಂಪು ವಿವರಿಸುತ್ತಾರೆ. ಗಾಂಧೀಜೀವನ ಮತ್ತು ಸತ್ಯಾಗ್ರಹ ಅಭಿನ್ನವಲ್ಲವೆಂಬುದು ಸರ್ವವೇದ್ಯ. ಅವರ ಜೀವನವೇ ಸತ್ಯಾಗ್ರಹದ ಪ್ರಯೋಗ ಮಂದಿರವಾಗಿತ್ತೆಂಬ, ಅವರೇ ಅದರ ಜನಕರೆಂಬ ಹಾಗೂ ವ್ಯಾಖ್ಯಾನಕಾರರೆಂಬ ನಿಜವೂ ಈ ಕವಿತೆಯಿಂದ ವ್ಯಕ್ತವಾಗುತ್ತದೆ.

ಸ್ವಾತಂತ್ರ್ಯ ಸಂಗ್ರಾಮದಲಿ ತನ್ನ ಜೀವವನು
ಲೆಕ್ಕಿಸದೆ ಹೋರುವನು ವೀರ ಸತ್ಯಾಗ್ರಹಿ
ಆತ್ಮಶಕ್ತಿಯ ಬಲದಿ ಮಿಂಚುಗಳ ಸಂತೈಸಿ
ಸಿಡಿಲುಗಳ ಬೋಳೈಸುವವನು ಸತ್ಯಾಗ್ರಹಿ
ಹೊಡೆಯದೆಯೆ ತಡೆಯುವವನು ವೀರ ಸತ್ಯಾಗ್ರಹಿ!
ಸಿಡಿಗುಂಡಿನೆದುರಿನಲಿ, ಕೂರಸಿಗಳೆದುರಿನಲಿ,
ಕಬ್ಬಿಣದ ಸಂಕೋಲೆಗಳ ಕರಿಯ ತೆಕ್ಕೆಯಲಿ,
ಜೈಲಿನಲಿ, ಅಧಿಕಾರಿಗಳ ಕ್ರೂರದರ್ಪದಲಿ,
ಹರಿವೆದೆಯ ನೆತ್ತರಿನ ಹೊಳೆಯಲ್ಲಿ, ಮುಂದಿಟ್ಟ
ಕಾಲ ಹಿಂದೆಗೆಯದಳಿವವನು ಸತ್ಯಾಗ್ರಹಿ ।
ದೇಶಮಾತೆಯ ಸುಖಕೆ ತನ್ನ ಸುಖವನು ಬೇಳ್ವ,
ದೇಶದ ಬದುಕಿಗಾಗಿ ತನ್ನ ಬದುಕನು ಸೀಳ್ವ
ಹಿಂಸೆಯನ ಹಿಂಸೆಯಿಂ ಹಿಂಸಿಸಿಯೆ ಕೊಲ್ವ,
ಸಮರಲೋಲನೆ ನಮ್ಮ ವೀರ ಸತ್ಯಾಗ್ರಹಿ,
..........................................................................
ಮರೆಯದೆಯೆ ಹಡೆದ ಮಾತೆಯ ಸೇವೆಯನು ಮಾಡಿ
ಮೌನದಿಂ ಮಡಿವವನು ಧನ್ಯ ಸತ್ಯಾಗ್ರಹಿ!
ಕಲಿಯುಗದ ಪ್ರಚ್ಛನ್ನ, ಕಲ್ಕಿ ಸತ್ಯಾಗ್ರಹಿ

(ಕುವೆಂಪು ಸಮಗ್ರ ಕಾವ್ಯ, ಸಂ. – ೧, ಪುಟ. ೧೨೬)

ನಿಜವಾದ ಸತ್ಯಾಗ್ರಹಿ ಗಾಂಧಿಯೊಬ್ಬರೇ; ಗಾಂಧೀಜಿಯ ಅನುಯಾಯಿಯೂ ಗಾಂಧೀಜಿಯೇ ಸರಿ. ಇಲ್ಲಿ ಕವಿ ಸತ್ಯಾಗ್ರಹ ಸಿದ್ಧಾಂತದ ಮಹಾವ್ಯಾಖ್ಯಾನಕ್ಕೆ ಗಾಂಧೀಜಿಯವರೆ ವಸ್ತುವಾಗಿ ವಿಜೃಂಭಿಸಿದ್ದಾರೆನ್ನಬಹುದು. ಗಾಂಧೀಜಿಯವರ ಪ್ರಬಲ ಅಸ್ತ್ರಗಳಲ್ಲಿ ಒಂದಾದ ಸತ್ಯಾಗ್ರಹ ಕುರಿತು ಕುವೆಂಪು ಬರೆದಿರುವುದು ಅವರ ಪ್ರಭಾವವನ್ನು ಬಿಂಬಿಸುತ್ತದೆ.

ಸ್ವಾತಂತ್ರ್ಯಪೂರ್ವ ನವೋದಯ ಕವಿಗಳಿಗೆ ಗಾಂಧೀಯೆಂಬ ಹೆಸರೇ ನಾಂದಿಯಾಗಿದೆ. ಭಾರತೀಯ ಜೀವನಕ್ಕೆ ಗಾಂಧೀಗೀತವೇ ಸುಪ್ರಭಾತ ಗೀತವಾಗಿದೆ. ಭಾರತೀಯರಿಗೆ, ಉಜ್ವಲವಾದ, ರಾಷ್ಟ್ರೀಯತೆಯನ್ನುಳ್ಳ ಈ ಕಾಲದ ಕವಿಗಳಿಗೆ ಗಾಂಧೀಜಿಯವರು ಪಾಲಿಸಿಕೊಂಡು ಬರುತ್ತಿದ್ದ ಮೌಲ್ಯಗಳಾದ ಸತ್ಯ, ಸರಳಜೀವನ, ತ್ಯಾಗ, ಮಾನವ ಪ್ರೇಮ, ವ್ಯಕ್ತಿ ಮತ್ತು ಸಮಾಜದ ನಡುವೆ

ಅನನ್ಯ ಸಂವಾದ ಸಾಮರಸ್ಯ ಸ್ಥಾಪಿಸುವುದೇ ಮುಂತಾದ ಮೌಲ್ಯಗಳು ನವೋದಯ ಕವಿಗಳ ಅಂತರಂಗಕ್ಕೆ ನೇರವಾಗಿ ನಾಟಿ ಅವರ ಪ್ರಭಾವಲಯದಲ್ಲಿ ಇಳಿಯಲು ಸಾಧ್ಯವಾಯಿತು. ಹೀಗೆ ಸ್ವಾತಂತ್ರ್ಯಪೂರ್ವದ ಸಂದರ್ಭದಲ್ಲಿ ಪ್ರಚೋದಕ ಗೀತೆಗಳು ರಚನೆಗೊಂಡಿರುವುದರ ಜೊತೆಗೆ ಗಾಂಧೀ ಪ್ರಭಾವ ನಿಚ್ಚಳವಾಗಿ ಮೆಲ್ಲ ಮೆಲ್ಲಗೆ ಹರಿದು ಬರುತ್ತಿರುವುದನ್ನು ತೋರುವ ಕವನಗಳನ್ನು ಗುರುತಿಸಬಹುದು. ೧೯೨೪ರಲ್ಲಿ 'ಪುಣಿಂಚತ್ತಾಯರು 'ಗಾಂಧೀ ವಿಜಯ' ಎನ್ನುವ ೧೦೧ನುಡಿಗಳ ನೀಳ್ಗವಿತೆ ಬರೆದಿರುವುದನ್ನು ಗಮನಿಸಿದರೆ ಆ ಕಾಲದ ಕವಿಗಳ ಮೇಲೆ ಗಾಂಧೀಜಿಯ ಪ್ರಭಾವ ಎಷ್ಟರ ಮಟ್ಟಿಗೆ ವಸ್ತುವಾಯಿತು ಎಂಬುದನ್ನು ಕಾಣಬಹುದು.

ಅಜ್ಞಾತ ಕವಿಯೋರ್ವನು ಗಾಂಧೀಜಿಯ ಪ್ರಭಾವಲಯಕ್ಕೆ ಒಳಗಾಗಿ ಹೀಗೆ ಬರೆಯುತ್ತಾನೆ.

ಕೂಗಿತ್ಯೆ ಮಹಾಗಾಂಧಿ ಕೋಗಿಲೇ ॥ ಕೈಮೀರಿತೆನುತಲೇ
ಕೂಗಿ ಕತ್ತಲೆಯು ಸಾಗುವ ಸಮಯದಿ । ತೂಗಿ ಬೇಗನೆಂದಾಗಸದಲೆ
ಮುಚ್ಚಿರುವ ಮುಸುಕನ್ನು ತೆಗೆದೊಗೆದು । ಕತ್ತಲೆಯನು ಕಳೆದ
ಸ್ವಚ್ಛವಾದ ಸತ್ಯಾಗ್ರಹ ತತ್ವವ । ಬಿಚ್ಚಿ ನೋಡಿಚ್ಚರವೆಂದೆನಂತಲೆ

(ಸ್ವಾತಂತ್ರ್ಯ ಸಮರದ ಗೇಯ ಗೀತೆಗಳು, ಪುಟ. ೧೦೩)

ಗಾಂಧೀಜಿಯವರನ್ನು ಮತ್ತು ಅವರ ತತ್ತ್ವ ಆದರ್ಶಗಳನ್ನು ನೆಚ್ಚಿಕೊಂಡ ಕನ್ನಡ ಕವಿಗಳು ಅವನ್ನು ಕನ್ನಡ ಜನತೆಗೆ ತಮ್ಮದೇ ಬರಹಗಳ ಮೂಲಕ ಹಂಚುವ ಕಾರ್ಯ ಮಾಡಿದರು. ಅವರಲ್ಲಿ ನಲವಡಿ ಶ್ರೀಕಂಠಶಾಸ್ತ್ರಿಗಳು ಒಬ್ಬರೂ. ಗಾಂಧಿ ಪ್ರಭಾವಕ್ಕೆ ಒಳಗಾದ ಇವರು ಲೇಖನಿಯಿಂದ ಹಲವಾರು ಕವನಗಳು ಹೊರಬಂದಿವೆ. ಅಲ್ಲೆಲ್ಲಾ ಇವರು ಗಾಂಧಿ ತತ್ವಗಳನ್ನು, ಗಾಂಧೀಜಿಯ ಮಹಿಮೆಯನ್ನು ವಸ್ತುವಾಗಿಸಿಯೇ ಕವನಗಳನ್ನು ರಚಿಸಿದ್ದಾರೆ. ಅವುಗಳಲ್ಲಿ 'ವಂದೇಮಾತರಂ', 'ಮೋದವ ಪಡೆಯಿರಿ', 'ಚಿತ್ತವಿಟ್ಟುಕೇಳಿರಿ' ಮುಂತಾದವು ಬಹಳ ಪ್ರಮುಖವಾದ ಕವನಗಳಾಗಿವೆ.

ಚಿತ್ತವಿಟ್ಟುಕೇಳಿರಿ ಕವನದಲ್ಲಿ ಕವಿಯೇ ಹೇಳುವಂತೆ,

ಚಿತ್ತವಿಟ್ಟು ಕೇಳಿರಿ ಶಿಸ್ತಿನ ಮೋಹರಂಥ ಕಥನಾ
ಮತ್ರ್ಯಲೋಕದೊಳಗವತರಿಸಿದ ಗಾಂಧಿ – ಪೈಗಂಬರರು ॥
ನಡೆಸಿದ ಶಾಂತಿ ಯುದ್ಧವನು ।
ಇಂಗ್ಲೀಷರ ಕಪಟ ತಂತ್ರವನು
ಸ್ವರಾಜ್ಯ ಸಂಪಾದನ ವ್ರತಧಾರಿಯಾಗಬೇಕಾ
ಹಿಂದುಸ್ತಾನವ ತರುಣವೀರರು ಟೊಂಕ ಕಟ್ಟಬೇಕಾ

(ಸ್ವಾತಂತ್ರ್ಯ ಸಮರದ ಗೇಯ ಗೀತೆಗಳು, ಪುಟ. ೧೦೧)

ಎಂದು ಗಾಂಧಿಯ ಅಹಿಂಸೆಯ ಹೋರಾಟಕ್ಕೆ ಜನಮನವನ್ನು ಸಜ್ಜುಗೊಳಿಸಲು ಅವರ ಹೆಸರಿನ ಕಥನ ಕಟ್ಟಿ ಅವರ ಶಾಂತಿಮಂತ್ರ ಅಹಿಂಸೆಯ ತತ್ತ್ವಗಳನ್ನು ಸ್ವರಾಜ್ಯ ಸಂಪಾದನೆಯ ಸಾಧನೆಗೆ ಪ್ರೇರೇಪಿಸುವ ರೀತಿಯಲ್ಲಿ ಕವನಗಳನ್ನು ರಚಿಸಿರುವುದನ್ನು ಕಾಣಬಹುದಾಗಿದೆ.

ದೇಶಕ್ಕಾಗಿ ಗಾಂಧಿಯವರು ತಮ್ಮನ್ನು ತಾವು ಅರ್ಪಿಸಿಕೊಂಡು ಸ್ವಾತಂತ್ರ್ಯ ಚಳವಳಿಗೆ ಧುಮುಕಿದ ಸಂದರ್ಭದಿಂದ ಸ್ಫೂರ್ತಿಗೊಂಡ ಎನ್.ವಿಷಕಂಠರಾವ್‌ರಂತ ಕವಿಗಳು ಗಾಂಧೀಜಿಯವರನ್ನು ಕುರಿತು ಈ ಬಗೆಯಾಗಿ ಚಿತ್ರಿಸುತ್ತಾರೆ. ತಮ್ಮ **"ನಿಷ್ಕಾಮ ಕರ್ಮಯೋಗಿ"** ಕವನದಲ್ಲಿ

ಜೈ ದೇಶಹಿತಾರ್ಪಿತ ಗಾಂಧಿ
ಮಹಾತ್ಮ ಭಾರತ ಮಾತೆಯ ಜೀವಾತ್ಮಾ
ಪರಮ ಧರ್ಮವು ಅಹಿಂಸೆಯೆಂದು
ಭರತಖಂಡಕದೆ ಜೀವನವೆಂದು
ಸರಳತೆ ಸಮತೆಯ ಉಸುರಿದೆ ಬಂದು
ಗಾಂಧಿಯೆಂಬ ಅಭಿದಾನದಿ ಬಂದು

(ಸ್ವಾತಂತ್ರ್ಯ ಸಮರದ ಗೇಯ ಗೀತೆಗಳು, ಪುಟ. ೯೯)

ಎಂಬುದಾಗಿ ಚಿತ್ರಿಸಿದ್ದಾರೆ.

ಗಾಂಧೀಜಿಯವರ ಸರಳ ಬದುಕಿಗೆ ಮಾರುಹೋದ ಹಲವು ಕವಿಗಳು ಅವರಿಗೆ ಶರಣು ಎನ್ನುವ ಮೂಲಕ ಅವರ ಸರಳತ್ವವನ್ನು ಜನರಿಗೆ ಬೋಧಿಸಲು ಅವರ ಮೇಲೆಯೇ ಅನೇಕ ಕವನಗಳನ್ನು ಬರೆದರು. ಅವರಲ್ಲಿ ಶ್ರೀಧರ ಖಾಣೋಲ್ಕರ್ ಎನ್ನುವ ಕವಿಗಳು ಒಬ್ಬರು. ಅವರು **"ಶರಣು ಮೋಹನದಾಸನಿಗೆ "** ಎಂಬ ಕವನದಲ್ಲಿ

"ಶರಣು ಮೋಹನದಾಸಗೆ ಶರಣು
ಶರಣು ಮೋಹನದಾಸಗೆ
ಶರಣು ಕರುಣವ ಸುರಿವ ತರಣಿಗೆ
ಶರಣು ಭಾರತ ತನಯಗೆ"



(ಸ್ವಾತಂತ್ರ್ಯ ಸಮರದ ಗೇಯ ಗೀತೆಗಳು, ಪುಟ. ೯೪)

ಗಾಂಧೀಜಿಯವರನ್ನು ಎಂದು ಚಿತ್ರಿಸಿದ್ದಾರೆ.

ತಿಪ್ಪಯ್ಯ ಮಾಸ್ತರರೆಂಬ ಕವಿ ನಮ್ಮ **"ಸರ್ವತ್ರಗಾಂಧಿ"** ಎಂಬ ಕವನದಲ್ಲಿ

ಗಾಂಧಿಯೇ ಗಾಂಧಿ ಸರ್ವತ್ರ ಗಾಂಧಿ
ಸಂದೇಹಕಾರರ ನಿಂದಿಸನು ಗಾಂಧಿ
ದೇಶದೇಶಗಳಲ್ಲಿ ದೇವರೆನಿಸುವ ಗಾಂಧಿ
ಕೋಶಕೋಶಗಳಲ್ಲಿ ಅಮ್ಮ ಗಾಂಧಿ
ದಾಸರಿಗೆ ನಿತ್ಯದಲಿ ಭಾಸವಾಗುವ ಗಾಂಧಿ
ವಾಸವಾಗಿಹ ಹೃದಯ ಪಟಲದಲ್ಲಿ ಗಾಂಧಿ

(ಸ್ವಾತಂತ್ರ್ಯ ಸಮರದ ಗೇಯ ಗೀತೆಗಳು, ಪುಟ. ೧೦೪)

ಗಾಂಧಿ ಎಂದು ಚಿತ್ರಿಸುವ ಮೂಲಕ ಗಾಂಧಿಯ ಬಗ್ಗೆ ತಮಗಿರುವ ಅಪಾರ ಪ್ರೀತಿ – ಅಭಿಮಾನವನ್ನು ಹೊರಹೊಮ್ಮಿಸಿದ್ದಾರೆ.

**'ಭಾರತ ಭೂಮಿಯ ಪ್ರಾರ್ಥನೆ'** ಎಂಬ ಕವನದಲ್ಲಿ ಬವಳಾಡಿ ಹಿರಿಯಣ್ಣ ಹೆಬ್ಬಾರರು ಗಾಂಧಿ ಮಹಾತ್ಮನನ್ನು ಸತ್ಯಧರ್ಮಗಳ ಅನನ್ಯ ಶಕ್ತಿ ಗಾಂಧಿ ಎಂದು ಚಿತ್ರಿಸುತ್ತಾರೆ.

ವರಮಹಾತ್ಮ ಗಾಂಧಿ ಸತ್ಯ । ಶರಧಿ ಸಾಧುವರ್ಯ ಧರ್ಮ ।
ದುರುದಯಾಳು ದೇವತಾಂಶ । ದುರಿತ ದೂರ ನೀಗಲೆಮ್ಮ
ಕೊರತೆಗಳನ್ನು ಕಳೆವ ರೀತಿಗೆ । ಜೀವದಾಸೆ । ದೊರೆದು
ದಣಿವು ತೀರ್ಪನಾತಗೆ । ಮೆಚ್ಚಿ ನಿನ್ನ । ಪರಹಿತೈಕ ಭಾವ ಗುಣದ
ಮೆರೆದು ಕರುಣ ಭಾವದಿಂದ
ಖ್ಯಾತಿವಂತ ಗಾಂಧಿ, ನುಡಿವ ಮಾತಿನಂತೆ
ನಾವು ನಮ್ಮ ಜಾತಿ ವೈರವಿಲ್ಲದೈಕ್ಯ ರೀತಿಯಿಂದ
ವಾಂಛಿತಾರ್ಥ ಜಾತವಾಗುವಂಥ ಕಾರ್ಯವ
ತಿಳುಹುವಂತೆ ನಿಷ್ಠೆಯಿಂದ. ಐಕ್ಯತೆಯನು
ಸಲಿಸು ಸಕಲ ಮನುಜರಿಗೆ

(ಸ್ವಾತಂತ್ರ್ಯ ಸಮರದ ಗೇಯ ಗೀತೆಗಳು, ಪುಟ.೧೮)

ಎಂದು ಹಾಡಿ ಹೊಗಲಿ ಗಾಂಧಿಯನ್ನು ಗುಣಗಾನ ಮಾಡಿದ್ದಾರೆ.

ಪುಂಡೂರು ಲಕ್ಷ್ಮೀನಾರಾಯಣ ಪುಣಿಂಚತ್ತಾಯರಂತು ಗಾಂಧೀಜಿಯವರ ಪ್ರಭಾವಕ್ಕೆ ಒಳಗಾಗಿ ಹಲವಾರು ಕವನಗಳನ್ನು ರಚಿಸಿದ್ದಾರೆ. ಅವೆಲ್ಲವೂ ಗಾಂಧಿತತ್ವಗಳನ್ನು ಸಮರ್ಥವಾಗಿ ಕಟ್ಟಿಕೊಡಬಲ್ಲ ಕವನಗಳಾಗಿವೆ. ಅವುಗಳಲ್ಲಿ 'ಉಪ್ಪಿನಕದನ' "ಖಾದಿಯಹಾಡು", "ಹರಿಜನ ಸಂಧಾನ", "ದರ್ಶನ" ಬಹಳ ಮುಖ್ಯವಾದ ಕವನಗಳಾಗಿವೆ. ಗಾಂಧಿಯವರ ಸ್ವದೇಶಿ ಉತ್ಪನ್ನ ಕರೆಯಿಂದ ಜಾಗೃತರಾದ ಕವಿ. ಸ್ವದೇಶಿ ಉಡುಪನ್ನು ಧರಿಸಿರಿ ಎಂದು ಕರೆಯಿಡುವ **"ಖಾದಿಯ**

**ಹಾಡು"** ಕವನ ಗಾಂಧೀಜಿಯವರ ಖಾದಿ ಉಡುಪಿಗೆ ನೀಡಿದ ಮನ್ನಣೆಯನ್ನು ತಿಳಿಸುವ ಕವನವಾಗಿದೆ.

> ಪರ ದೇಶದ ಬಟ್ಟೆಯ ಬಿಡು ಬಿಡು
> ಸುಡು ಸುಡು "ದೇಶಬಂಧು"
> ಸ್ವರ್ಣ ಧರಣಿಯಾ ಸ್ವರ್ಣವನೆಲ್ಲವ
> ಪೂರ್ಣ ವಿದೇಶಿ ವಸ್ತ್ರಕೆ ಕೊಡುವ ।
> ಕರ್ಣ ಕಠೋರ ವಿಚಾರವ ಸುಡುಸುಡು

(ಸ್ವಾತಂತ್ರ್ಯ ಸಮರದ ಗೇಯ ಗೀತೆಗಳು, ಪುಟ. ೧೧೮)

ಎನ್ನುವ ಕವಿ ಮುಂದುವರಿದು

> ಪರದೇಶಿಗಳಾವಸಕ್ಕೀಯುವ
> ಭರತಖಂಡದಾ ಜೀವನಧನವ ।
> ಪರಮ ಸ್ವದೇಶೀ ಖಾದಿಗೆ ಕೊಡುಕೊಡು
> ಭಾರತ ಸ್ವಾತಂತ್ರ್ಯಾಂಬರ ಮಿತ್ರನು
> ಧೀರ ಮಹಾತ್ಮನು ಸಾರುವ ನುಡಿಯನು
> ದೂರದೆ ಮನ್ನಿಸಿ ಖಾದಿಯ ತೊಡು ತೊಡು (ಅದೇ, ಪುಟ. ೧೧೯)

ಎಂಬುದಾಗಿ ಗಾಂಧೀಜಿಯವರು ಕರೆಕೊಟ್ಟ ಸ್ವದೇಶಿ ಬಟ್ಟೆಯ ಹಿರಿಮೆಯನ್ನು ಸಮರ್ಥವಾಗಿ ಕಟ್ಟಿಕೊಟ್ಟಿದ್ದಾರೆ .

ಹೀಗೆ ಸ್ವಾತಂತ್ರ್ಯಪೂರ್ವದ ಬಹುತೇಕ ನವೋದಯ ಕವನಗಳಲ್ಲಿ ಹರಡಿಕೊಂಡ ಗಾಂಧಿ ಛಾಯೆ ಹೆಚ್ಚು ದಟ್ಟವೂ ಸಾಂದ್ರವೂ ಆಗಿರುವುದಲ್ಲದೆ, ವೈಚಾರಿಕ ದೃಷ್ಟಿಕೋನವನ್ನು ಬೆಳೆಸಿರುವುದು ಉಲ್ಲೇಖಾರ್ಹ. ಈ ಸಂದರ್ಭದಲ್ಲಿ ಕವಿಗಳು ಪ್ರದರ್ಶಿಸುವ, ರಾಷ್ಟ್ರೀಯತೆಯ ಶೈಲಿ ಸ್ವಾತಂತ್ರ್ಯ ಹೋರಾಟದ ಮುಖ್ಯವಾಹಿನಿಯಲ್ಲಿ ಜನತೆಯನ್ನು ತೊಡಗಿಕೊಳ್ಳುವ ಉದ್ದೇಶವನ್ನು ಮಾತ್ರ ಹೊಂದಿರದೆ, ಪರತಂತ್ರ ವ್ಯವಸ್ಥೆಯಿಂದಾದ ಸಮಸ್ಯೆಗಳ ವಿವಿಧ ಮಗ್ಗಲುಗಳನ್ನು ಬಿಚ್ಚಿಡುತ್ತಾರೆ, ಅದಕ್ಕೆ ಪರಿಹಾರಗಳನ್ನೂ ಗಾಂಧಿ ಪ್ರಣೀತ ನೆಲೆಯಲ್ಲಿಯೇ ಸೂಚಿಸುತ್ತಾರೆ. ಪರಿಹಾರ ಕಂಡುಕೊಳ್ಳದೆ ಹೋದರೆ ಆಗಬಹುದಾದ ಅನಾಹುತಗಳ ಬಗ್ಗೆ ಸೂಚ್ಯವಾಗಿ ಎಚ್ಚರಿಸುತ್ತಾರೆ.

ಸ್ವಾತಂತ್ರ್ಯಪೂರ್ವದ ನವೋದಯದ ಕನ್ನಡ ಕವನಗಳಲ್ಲಿ ಗಾಂಧೀ – ಗಾಂಧೀವಾದ ಕೇಂದ್ರವಸ್ತುವಾಗುವುದನ್ನು ನೋಡಿದರೆ ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳವಳಿಯ ಮೇಲೆ ಗಾಂಧಿ ಪ್ರಭಾವದ ಗಾಢತೆಯ ಅರಿವಾಗುತ್ತದೆ. ಗಾಂಧಿ ಕವಿಮನದ ದೇವರಾಗಿಬಿಟ್ಟರು. ಜನಮನದ

ದೇವತಾಮನುಷ್ಯರಾದರು, ಶಾಂತಿದೂತರಾದರು, ಪ್ರವಾದಿಯಾದರು. ೧೯೨೦ಕ್ಕೆ ಹೊತ್ತಿಕೊಂಡ ಗಾಂಧಿ ಸತ್ತ ಮೇಲೂ ಜೀವಂತವಾಗಿದೆ. ಗಾಂಧಿ ಪ್ರಭಾವ ಸಂಪೂರ್ಣವಾಗಿ ನಂದಿಹೋಗುವುದು ಸಾಧ್ಯವೇ ಇಲ್ಲ ಎಂಬುವಷ್ಟರಮಟ್ಟಿಗೆ ಇತಿಹಾಸದಲ್ಲಿ ಸೇರಿಕೊಂಡಿದೆ.

ಈ ಮಹಾ ಸ್ವಾತಂತ್ರ್ಯ ರಣಯಾಗ ಧೂಮದಲಿ
ಶ್ವೇತಾಗ್ನಿ ಜ್ವಾಲೆಯೊಂದುರಿಯುತಿದೆ; ನಿಶ್ಚಲಂ
ರಂಜಿಸುತ್ತಿದೆ. ಶಾಂತಿಯಲಿ ಹಿಮ ಮಹಾಚಲಂ
ರಾರಾಜಿಸುವಂತೆ ನೀಲಿಮ ನಭೋರಾಯದಲಿ

ಎಂದು ಕುವೆಂಪು ಚಿತ್ರಿಸುವಂತೆ ಗಾಂಧೀಜಿಯವರು ಸ್ವಾತಂತ್ರ್ಯಪೂರ್ವ ನವೋದಯ ಕಾವ್ಯ ಸಂದರ್ಭದಲ್ಲಿ ಕವಿಗಳ ಮನ್ನಣೆಗೆ ಪಾತ್ರರಾಗಿದ್ದಾರೆ.

ಅಧ್ಯಾಯ – ೪

## ಸ್ವಾತಂತ್ರ್ಯ ಹೋರಾಟ ಸಂದರ್ಭದ ನವೋದಯ ಕವನಗಳಲ್ಲಿ ಗಾಂಧೀಜಿ ಚಿತ್ರಣ

ಮಹಾತ್ಮ ಗಾಂಧೀಜಿಯವರು ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ನೇತೃತ್ವ ವಹಿಸಿಕೊಂಡು ಇದರ ಜೊತೆಗೆ ಅನೇಕ ಸಮಾಜೋದ್ಧಾರಕ ರಚನಾತ್ಮಕ ಕಾರ್ಯಗಳನ್ನು ಹಮ್ಮಿಕೊಂಡು ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟರು. ನಮ್ಮನ್ನು ಭವ್ಯ ನವಭಾರತದ ಹೆಬ್ಬಾಗಿಲಿಗೆ ತಂದು ನಿಲ್ಲಿಸಿ ಮುಂದೆ ಹೇಗೆ ಹೋಗಬೇಕೆಂದು ಮಾರ್ಗ ತೋರಿಸಿದರು. ಜಾಗತಿಕ ಮಟ್ಟದಲ್ಲಿ ದೇಶದಿಂದ ವ್ಯಕ್ತಿಯನ್ನು ಗುರುತಿಸಿದರೆ ಅದು ಆ ವ್ಯಕ್ತಿಯ ಶ್ರೇಷ್ಠತೆಯ ಮಾನದಂಡವಲ್ಲ. ಅದಕ್ಕೆ ಬದಲಾಗಿ ವ್ಯಕ್ತಿಯಿಂದ ದೇಶವನ್ನು ಗುರುತಿಸಿದರೆ, ಆ ವ್ಯಕ್ತಿಯ ವಿಶ್ವಮಾನ್ಯ ವ್ಯಕ್ತಿತ್ವಕ್ಕೆ ನಿದರ್ಶನವಾಗುತ್ತದೆ. ಗಾಂಧೀಜಿಯವರು ಇಂಥವರು. ಗಾಂಧಿಯೆಂದರೆ ಇಂಡಿಯಾ, ಇಂಡಿಯಾ ಎಂದರೆ ಗಾಂಧೀ – ಎಂದು ಅಂದು ವಿದೇಶದವರು ತಿಳಿದಿದ್ದರು. ಗಾಂಧೀಜಿಯವರ ಪ್ರಭಾವದಿಂದ ಹುಲ್ಲು ಕಡ್ಡಿಯೂ ಸಹಿತ ಬ್ರಹ್ಮಾಸ್ತ್ರವಾಗಿ ಮಾರ್ಪಡುತ್ತಿತ್ತು. ಯಾವ ಚೇತನವೂ ಇದರಿಂದ ತಪ್ಪಿಸಿಕೊಂಡು ಸುಪ್ತವಾಗಿರುವುದು ಸಾಧ್ಯವಿದ್ದಿರಲಿಲ್ಲ. ಇಡೀ ದೇಶಕ್ಕೆ ಸ್ಪೂರ್ತಿಯ ಸೆಲೆಯಾಗಿದ್ದರು. ಗಾಂಧೀಜಿಯವರ ಪ್ರಭಾವದಿಂದ ದೇಶದ ಜನತೆ ಸ್ವಾತಂತ್ರ್ಯ ಆಂದೋಲನಕ್ಕೆ ಸ್ಪೂರ್ತಿಗೊಂಡಂತೆ ಸಾಹಿತಿಗಳಿಗೂ ಸ್ಪೂರ್ತಿಯಾದರು. ಸಾಹಿತಿಗಳು ಗಾಂಧೀಜಿಯವರನ್ನು ಕುರಿತು ಬರೆಯುವದೆಂದರೆ, ದೇಶದ ಸ್ವಾತಂತ್ರ್ಯ ಚಳುವಳಿಯನ್ನೇ ಕುರಿತು ಬರೆದಂತೆಯೇ. ಆ ಸಾಹಿತ್ಯವೂ ಜನತೆಗೆ ಸ್ಫೂರ್ತಿಯಾಯಿತು. ಜನತೆಯ ಹೋರಾಟವೂ ಸಾಹಿತಿಗಳಿಗೆ ಸ್ಫೂರ್ತಿಯಾಯಿತು.

ಸ್ವಾತಂತ್ರ್ಯ ಆಂದೋಲನ ಮತ್ತು ಇದರ ನಾಯಕ ಗಾಂಧೀಜಿಯವರು, ಸಾಹಿತಿಗಳಿಗೆ ಪ್ರಭಾವ ಬೀರಿದರೆ ಜನತೆಗೂ ಈ ಸಾಹಿತ್ಯ ಪ್ರೇರಣೆ, ಸ್ಫೂರ್ತಿ ನೀಡಿತು. ಹೀಗೆ ಒಂದಕ್ಕೊಂದು ಪೂರಕ – ಪ್ರೇರಕಗಳಾದವು. ಭಾರತದಲ್ಲಿ ಅಷ್ಟೇ ಅಲ್ಲ, ವಿಶ್ವದ ಹಲವಾರು ಭಾಷೆಯ ಲೇಖಕರಿಗೆ ಗಾಂಧೀಜಿಯವರು ಪ್ರಭಾವ ಬೀರಿದ್ದಾರೆ. ಇವರ ನಿಡುಬಾಳನ್ನು ಕುರಿತು ಕೃತಿ ರಚಿಸಿರುವರು. ಹಾಗೆಯೇ ಕನ್ನಡ ಸಾಹಿತಿಗಳು ಸ್ವಾತಂತ್ರ್ಯ ಹೋರಾಟ ಸಂದರ್ಭದಲ್ಲಿ ಗಾಂಧೀಜಿಯವರನ್ನು ಕುರಿತು – ಕಾವ್ಯರಚಿಸಿರುವರು ಅವುಗಳನ್ನೂ ಈ ಮುಂದಿನಂತೆ ಕಾಣಬಹುದು.

ಸ್ವಾತಂತ್ರ್ಯ ಹೋರಾಟ ಸಂದರ್ಭದ ನವೋದಯದ ಕವನಗಳಲ್ಲಿ ಗಾಂಧೀಜಿಯವರನ್ನು ಕುರಿತು ಕನ್ನಡದ ನವೋದಯದ ಕವಿಗಳು ಕವನ ಕಾವ್ಯ ರಚಿಸಿರುವರು. ಇದೇ ಒಂದು

ಸಂಶೋಧನಾ ಮಹಾಪ್ರಬಂಧದ ವಸ್ತು – ವಿಷಯವಾಗುವಷ್ಟು ವ್ಯಾಪ್ತಿಯನ್ನು ಹೊಂದಿದೆ. ಆದರೆ ನನ್ನ ಅಧ್ಯಯನಕ್ಕೆ ಪೂರಕವಾಗಿರಲೆಂದು ಮಿತಿಗೊಳಿಸಿ ಪ್ರಮುಖವಾದವುಗಳನ್ನು ಮಾತ್ರ ಅವಲೋಕಿಸಲಾಗಿದೆ.

ಗೋವಿಂದ ಪೈ ಅವರು **'ಮಹಾತ್ಮರ ಉಪವಾಸ'** – ಕವನದಲ್ಲಿ ಗಾಂಧೀಜಿಯವರ ವ್ಯಕ್ತಿತ್ವದ ಚಿತ್ರಣವನ್ನು ಕೊಟ್ಟಿರುವರು. ಇದು ಗಾಂಧೀಜಿಯವರು ೧೯೨೪ರಲ್ಲಿ ೨೧ ದಿನ ಉಪವಾಸ ಕೈಗೊಂಡ ಸಂದರ್ಭವನ್ನು ಕುರಿತಿದ್ದರೂ ಅವರ ಜೀವನ – ಸಾಧನೆ – ಸಿದ್ಧಿಗಳ ಸಿಂಹಾವಲೋಕನವಿದೆ. ಅವರು ಉಪವಾಸ ಕೈಗೊಂಡ ಬಗೆಯನ್ನು –

"ಮಂಜಿನೇಕಾಂತದಲ್ಲಿ ಶ್ರೀ ಹರಿಯ ಹಂಬಲಿಸಿ,
ಹೃದಯ ಕ್ಷುಧೆಯನ್ನೂಡುತೊಡಲ ಹಸಿವಿಂದಂ,
ಮನದ ರಂಭೆಯ ಗೆದ್ದು ಶುಕನಾತನನ್ನೊಲಿಸಿ
ಭಕ್ತಿ ಗಂಗೆಯ ಭಾರತದ ತೃಷೆಗೆ ತಂದಂ"

(ಗೋವಿಂದ ಪೈ, ಗಿಳಿವಿಂಡು, ಪುಟ. ೪೫).

ಶ್ರೀ ಹರಿಯನ್ನು ಏಕಾಂತದಲ್ಲಿ ಧ್ಯಾನಿಸಿ ಬರಿ ದೈಹಿಕವಾಗಿಯಲ್ಲ, ಹೃದಯದಲ್ಲಿ, ಅಂತಃಕರಣದ ಹಸಿವಿನಿಂದ ಹಂಬಲಿಸಿತ್ತು. ತನು–ಮನಗಳನ್ನು ಗೆದ್ದು ಭಗೀರಥನು ಗಂಗೆಯನ್ನು ಹರಿಸಿದಂತೆ ನೀನು ತನು – ಮನಗಳನ್ನು ಗೆದ್ದು ಭಾರತದ ಹಸಿವಿಗೆ ಭಕ್ತಿ ಗಂಗೆಯನ್ನು ಹರಿಸಿದೆ. ನೀನು ದಿಲ್ಲಿಯಲ್ಲಿ ಇಪ್ಪತ್ತೊಂದು ದಿನ ಉಪವಾಸ ಕೈಗೊಂಡು ಅದು ಹೇಗೆ ನೀನು ಇಡೀ ದೇಶಕ್ಕೆ ಪ್ರೇಮ ಬೀಜ ಬಿತ್ತಿದೆಯೋ ಆಶ್ಚರ್ಯವಾಗುತ್ತದೆ.

ದಿನಕರ ದೇಸಾಯಿ ಅವರು ಚೌಪದಿಗಳಲ್ಲಿ ಗಾಂಧೀಜಿಯವರ ವ್ಯಕ್ತಿತ್ವವನ್ನು ಬಣ್ಣಿಸಿರುವರು. ವಿಶ್ವಕ್ಕೆ ವಿಶ್ವವೇ ಅಂದು ಹೋರಾಟದಲ್ಲಿ ಮುಳುಗಿ ಸಂದಿಗ್ಧ ಸ್ಥಿತಿಯಲ್ಲಿತ್ತು. ಏಕತೆ ಎಂಬುದೇ ಇದ್ದಿರಲಿಲ್ಲ. ವಿಶ್ವವನ್ನೇ ಒಂದು ಮಾಡುವ ಶಕ್ತಿ, ವಿಶ್ವಕ್ಕೆ ದಾರಿ ತೋರಿಸುವ ಶಕ್ತಿ ಗಾಂಧೀಜಿಯವರಿಗೆ ಮಾತ್ರ ಇತ್ತು. ಈ ನಾಡು ಆಡಳಿತಾತ್ಮಕವಾಗಿ, ಸಾಮಾಜಿಕವಾಗಿ, ಧಾರ್ಮಿಕಾಗಿ, ಭಾಷಿಕವಾಗಿ ಹಲವಾರು ಭೇಧಗಳ ವೈಪರೀತ್ಯದಿಂದಾಗಿ, ಏಕತೆ ಇದ್ದಿರಲಿಲ್ಲ. ಇದನ್ನು ಒಂದು ಮಾಡುವ ಶಕ್ತಿ ಗಾಂಧೀಜಿಯವರಿಗೆ ಮಾತ್ರ ಇತ್ತೆಂದು, ಇದರ ದಾರಿ ತೋರಿಸುವ ದಿಕ್ಸೂಚಿಯಾಗಿದ್ದರೆಂಬುದನ್ನು ಹೀಗೆ ವರ್ಣಿಸಿರುವರು :

"ತ್ರಿಭುವನಕೆ ದಾರಿ ತೋರಿಸಿದೆ, ಬಾಪೂಜಿ,
ನಿನ್ನ ಕೈಯೊಳಗಿತ್ತು ಕಾಂಚನದ ಸೂಜಿ

ಚಿಂದಿಯಾದರೂ ಪೃಥಿವಿ ಹೋರಾಟದಿಂದೆ.
ಅದನು ಹೊಲೆಯುವ ಶಕ್ತಿ ನಿನಗಿತ್ತು ತಂದೆ"

(ದಿನಕರ ದೇಸಾಯಿ, ದಿನಕರನ ಚೌಪದಿ, ಪುಟ. ೧೯೭.)

ಗಾಂಧೀಜಿಯವರಿಗೆ, ಎಂಥವರನ್ನು ಮಂತ್ರಮುಗ್ಧರನ್ನಾಗಿಸುವ, ಸೋಲಿಸುವ ಆತ್ಮಶಕ್ತಿಯಿತ್ತೆಂಬುದನ್ನು ಹೀಗೆ ಬಿಂಬಿಸಿರುವರು.

"ಬಾಪೂಜಿ ನಿನ್ನ ಕೈಯೊಳಗಿದ್ದ ಕೋಲು
ಕೋಲ್ಮಿಂಚಿಗೂ ತಪ್ಪಿಸಬಹುದಲ್ವೆ ಸೋಲು?
ಸಾಮ್ರಾಜ್ಯಶಾಹಿಗೂ ಕಲಿಸಿತ್ತು ಬುದ್ಧಿ.
ಇದಕೆ ಕಾರಣ ನಿನ್ನ ಆಂತರಿಕ ಶುದ್ಧಿ"

(ದಿನಕರ ದೇಸಾಯಿ, ದಿನಕರನ ಚೌಪದಿ, ಪುಟ. ೩೧೮)

ಹೀಗೆ ಗಾಂಧೀಜಿಯವರ ಸಾಧನೆ – ಸಿದ್ಧಿಗಳನ್ನು, ವ್ಯಕ್ತಿತ್ವವನ್ನು ಬಣ್ಣಿಸಿರುವರು. ಆನಂದಕಂದರು (ಕಾರಹುಣ್ಣಿಮೆ ಸಂಕಲನದ) **'ಹಗೆಯ ಗೆಳೆಯ'** ಕವನದಲ್ಲಿ ಗಾಂಧೀಜಿಯವರು ಹಗೆಗಳಾದ ಬ್ರಿಟೀಷರನ್ನು ಕೊನೆಗೆ ಗೆಳೆಯರನ್ನಾಗಿ ಪರಿವರ್ತನೆ ಮಾಡಿಕೊಂಡ ಅವರ ವ್ಯಕ್ತಿತ್ವವನ್ನ ಬಹಳ ಸೊಗಸಾಗಿ ಚಿತ್ರಿಸಿರುವರು.

ಗಾಂಧೀಜಿಯವರ ಜನನದಿಂದ ಕತ್ತಲೆ ತುಂಬಿದ ಈ ನಾಡಿನಲ್ಲಿ ಬೆಳಕು ಬಿದ್ದು ಶಾಂತಿ – ಸುಖಕ್ಕೆ ನಾಂದಿಯಾಯಿತು. ಭಾರತದ ಪೂರ್ವದ ಪುಣ್ಯವೇ ಪುರುಷ ರೂಪದಲ್ಲಿ (ಗಾಂಧೀ) ಕರಮಚಂದರ ಮಗನಾಗಿ ಜನಿಸಿದರು. ಅರಿವನ್ನುಂಡು ಬೆಳೆದನು. ಈ ಪುರುಷನು ತನ್ನ ನಾಡಜನರು ಅನ್ಯರ ವಶವಾಗಿರುವ ದುಃಸ್ಥಿತಿಯನ್ನು ಕಾಣುತ್ತಾನೆ. ಭೂಮಿ, ದುಡಿಮೆ ಇವರ ಸಂಪತ್ತು, ಎಲ್ಲವೂ ಇವರದೇ ಆದರೂ ಜನ ಪರದಾಸದ್ಯದಿಂದಾಗಿ ಅಸ – ವಸನಕ್ಕಾಗಿ ಪರಿತಪಿಸುತ್ತಿದ್ದರು. ಇದನ್ನು ಕಂಡು ಗಾಂಧಿ 'ಪರದಾಸ್ಯ ಭೂತವ' – ನ್ನೋಡಿಸಲು ಕಂಡುಕೊಂಡ ನೀತಿ, ಕತ್ತಿ – ನೆತ್ತರಿಲ್ಲದ 'ಸತ್ಯಾಗ್ರಹ' ಅಸ್ತ್ರದಿಂದ ಹಗೆಯ ಹಿಂಸೆಯ ಭೀತಿಯನ್ನು ಕಳೆದನು.

"ಭರತ ಧರಣಿಯೊಳೆಲ್ಲ ತಿರುಗುತ
ಮುರಲಿಯೂದಿದ ಮೋಹನ;
ಕುರಿಜನರು ನರಹರಿಗಳಾದರು"

(ಬೆಟಗೇರಿ ಕೃಷ್ಣಶರ್ಮ (ಆನಂದಕಂದ), ಕಾರಹುಣ್ಣಿಮೆ, ಪುಟ. ೭೯.)

ಈತನ ಪ್ರಭಾವದಿಂದ ಇಡಿ ದೇಶದ ಜನತೆಯಲ್ಲಿ ರಾಷ್ಟ್ರೀಯಪ್ರಜ್ಞೆ ಜಾಗೃತವಾಯಿತು. ಕುರಿಗಳಂತಿದ್ದವರು ನರಹರಿಗಳಾದರು. ಕೊನೆಗೆ ಗಾಂಧೀಜಿಯವರ ನೇತೃತ್ವದ ಈ ಹೋರಾಟಕ್ಕೆ ಬ್ರಿಟೀಷರು ಸೋತು –

"ಹಗೆಯು ಸೋತನು, ಶರಣು ಬಂದನು,
ಜಗದ ಗುರು ನೀನೆಂದನು;
ನಗುತ ಗಾಂಧಿಯ ಹಗೆಯನಪ್ಪುತ
ಗೆಳೆಯನಾಗಿಯೆ ನಿಂದೆನು"

(ಬೆಟಗೇರಿ ಕೃಷ್ಣಶರ್ಮ (ಆನಂದಕಂದ), ಕಾರಹುಣ್ಣಿಮೆ, ಪುಟ. ೮೦.)

ಬ್ರಿಟಿಷರು ಸೋತು ಭಾರತಕ್ಕೆ ಸ್ವತಂತ್ರ ಕೊಟ್ಟರು. ಕಾಮನ್‌ವೆಲ್ತ್ ಸ್ನೇಹಕೂಟ ಕಟ್ಟಿ ಭಾರತವನ್ನು ಅದರ ಸದಸ್ಯನನ್ನಾಗಿ ಮಾಡಿಕೊಂಡು ಗೆಳೆಯನನ್ನಾಗಿ ಮಾಡಿಕೊಂಡಿರುವುದನ್ನು ಗಾಂಧೀಜಿಯವರ ಕುರಿತ ಈ ಚಿತ್ರಣದಲ್ಲಿ ಗಾಂಧೀಜಿ ಮತ್ತು ಬ್ರಿಟಿಷರ ಸ್ನೇಹವನ್ನಾಗಿ ಬಿಂಬಿಸಿರುವರು. ಇಂದು ನಾವೆಲ್ಲರೂ ಗಾಂಧೀಜಿಯವರ ಶ್ರಮದಿಂದಲೇ ಭಾರತ ಮುಕ್ತಾಯವಾಯಿತೆಂದು ಗಾಂಧೀಜಿಯವರನ್ನು ಅಬಾಲವೃದ್ಧಾದಿಯೆಲ್ಲರೂ ಪೂಜಿಸುತ್ತೇವೆ. (ಇದೇ ಸಂಕಲನದ) – **'ಮಹಾತ್ಮನಿಗೆ'** ಕವನದಲ್ಲಿಯೂ ಅವರ ವ್ಯಕ್ತಿತ್ವವನ್ನು ಬಣ್ಣಿಸಿ ನಮನ ಸಲ್ಲಿಸಿರುವರು. ಗಾಂಧೀಜಿಯವರ ಕಣ್ಣು – ಕಿವಿ – ಮನ – ಬುದ್ಧಿಗಳು ಅಸಾಧಾರಣವಾದವುಗಳು. ಅವರ ಕಣ್ಣು ಕತ್ತಲಲ್ಲೂ ಗುರಿಯ ದಾರಿ ಕಾಣುವಂತದ್ದು. ಕಿವಿಯು ಮಾತೆಯುಲು ಕಣ್ಣೀರು ಸುರಿಸುವ ಧ್ವನಿ ಕೇಳುವಂತದ್ದು, ಮನಸ್ಸು ದುಷ್ಟ ಕಾರ್ಯದ ಧೂಳಿನಲ್ಲಿದ್ದರೂ ಅದು ತಗುಲದಂತಹದ್ದು, ಅವರ ಬುದ್ಧಿ ಜಗತ್ತಿನಲ್ಲಿಯೇ ಅಪರೂಪವಾದದ್ದು, ಬೆಳಕನ್ನು ನೀಡುವಂತಹದ್ದು. ಇವರ ಉಸಿರು ಜಗದ ಜಡತ್ವಕ್ಕೆ ಜೀವವನ್ನು ಕೊಟ್ಟಿತು. ಧಮನಿ (ನರನಾಡಿಗಳು) ಜನರಲ್ಲಿ ಚೈತನ್ಯ ಬಿತ್ತಿತು. ವಾಣಿ ದೇಶದ ದಿಕ್ಕು ದಿಕ್ಕಿಗೂ ಪ್ರೇಮದ ಸಂದೇಶ ತಿಳಿಸಿತು. ಇವರ ಶ್ರಮದ ಪುಣ್ಯ ಜೀವಜಂಗುಳಿಯನ್ನುಳಿಸಿತು.

"ಮೈತ್ರಿಯಿಂದೆ ಶತ್ರುಗಳನು ಸೋಲಿಸಿರುವ ವೀರ,
ಮೃತ್ಯುವನೂ ಮಿತ್ರನಂತೆ ಸ್ವಾಗತಿಸಿದ ಧೀರ,
ನಿನ್ನ ನೌಕೆ ನಂಬಿದರನು ತಲ್ಪಿಸಿತ್ತೈ ತೀರ
ನೀನು ನಡೆದ ದಾರಿಯದೇ ಸತ್ಯಧರ್ಮಸಾರ" (ಅದೇ ಪುಟ–೮೧)

ಹೀಗೆ ಅವರ ವ್ಯಕ್ತಿತ್ವದ ಗುಣಗಾನ ಮಾಡಿರುವರು. ರಂ.ಶ್ರೀ ಮುಗಳಿ ಅವರು (ಬಾಸಿಗ ಸಂಕಲನದ) **'ಮಹಾತ್ಮರನ್ನು ಕುರಿತು'** ಕವನದಲ್ಲಿ 'ಬೇಡಿಯೆ ಬರಬೇಕು ನಾಡಿನ ಸೇವೆಯ ಮಾಡುವ ಭಾಗ್ಯಕೆ' ಎಂದು ಆರಂಭವಾಗುವ ಪಲ್ಲವಿಯೊಂದಿಗೆ, ಪದ್ಯದ ಮಂದಿನ ಭಾಗದಲ್ಲಿ ಗಾಂಧೀಜಿಯವರ

ಸೇವೆಯನ್ನು ಶ್ಲಾಘಿಸಿರುವರು. ಗಾಂಧೀಜಿಯವರು ದೇಶವನ್ನು ಬಂಧಮುಕ್ತ ಮಾಡುವಲ್ಲಿ ಉಂಡ ಕಹಿಯನ್ನು "ಸಾಸಿರ ಚೇಳಿನ ಕಡಿತ"ವೆಂಬ ರೂಪಕೊಟ್ಟಿರುವರು. ಬಡವ ಬಗ್ಗರ ಬಗೆಗೆ ಕಂಬನಿಗರೆದಿದ್ದಾರೆ. ತಾಯಿಯ ಬಂಧನ – ಬಿಡುಗಡೆಗಳೇ ತನ್ನ ಆತ್ಮದ ಬಂಧನ – ಬಿಡುಗಡೆಗಳೇ ತನ್ನ ಆತ್ಮದ ಬಂಧನ – ಬಿಡುಗಡೆಯಾಗಿತ್ತು. ತಾಯಿಯ ಬಿಡುಗಡೆ ಮಾಡಿಸದಿದ್ದರೆ ಸಾಯುವದೇ ನಿಜ. ಗಾಂಧೀಜಿಯವರ ದೈಹಿಕ ರೂಪವನ್ನು, ದೇಶದ, ವಿಶ್ವದ, ಭಾವಿಷ್ಯದ ಆಶೋತ್ತರಗಳಿಗೆ ಮತ್ತು ಅವರ ಧ್ಯೇಯ ತತ್ತ್ವ, ಆದರ್ಶಗಳಿಗೆ, ಪ್ರತಿಮೆಗಳನ್ನಾಗಿ – ಈ ರೀತಿ ವರ್ಣಿಸಿರುವರು :

"ಮುನಿಸಿನ ತೋರಿಕೆ ಚಿಂತೆಯ ಮುದುಡಿಕೆ
ಕನಸಿನ ಕಾಣಿಕೆ ನಗೆ – ನೆರ ಬರುವಿಕೆ
ಮನಸಿನ ಭಾವಗಳೆಲ್ಲವು ರಾಷ್ಟ್ರದ
ತನುವಿನೊಳಿರುವೊಲು ಕಾಣುವ ಪುಣ್ಯಕೆ"

(ರಂ.ಶ್ರೀ. ಮುಗಳಿ, ಬಾಸಿಗ, ಪುಟ. ೫೦.)

ಅಲ್ಲದೆ ವಿಶ್ವವೇ ಅವರ ಆತ್ಮ, ವಿಶ್ವದ ಪ್ರಾಣಿಗಲೇ ಅವರ ದೇಹದ ಅವಯವಗಳು, ಸತ್ಯವೇ ಅವರ ಬಲ, ಪಂಡಿತ ವಿದ್ವಾಂಸರನ್ನು ಮೆಚ್ಚುವ ಅವರ ಬುದ್ಧಿ, ನೀರಿನ ಪೋಷಣೆ ಇಲ್ಲದೆ ಅರಳಿದ ಮೊಗ್ಗಿನಂತಿದೆ. ಹೃದಯದಲ್ಲಿಯೇ ಯೋಗದ ಅಮೃತವನ್ನು ಸುರಿಸುತ್ತ ಸದಾ ಆನಂದದ ಕುರುಹಾಗಿದ್ದಾರೆ.

(ಅಪಾರ ಕರುಣೆ ಸಂಕಲನದ) **'ಮಾನವದೇವ'** ಕವನದಲ್ಲಿ ಗಾಂಧೀಜಿಯು 'ಮೋಹನದೀಪ್ತಿಯಾಗಿ, ಬಾಳಿನ ಕೀರ್ತಿಯಾಗಿ, ದೇವಮಾನವನಾಗಿ – ಭೂಮಿಗಿಳಿದು ಬಂದು ಮಹತ್ಕಾರ್ಯಗಳನ್ನು ಗೈದ ಬಗೆಯನ್ನು ವರ್ಣಿಸಿರುವರು. ಕಲಿಯಾಗಿಯೂ, ಮುನಿಯಾಗಿಯೂ, ಬದುಕುವ ಬಗೆಯನ್ನು ಶತಶತಮಾನಗಳಿಂದ ಕಂಡುಕೊಳ್ಳುವದು ಸಾಧ್ಯವಾಗಿರಲಿಲ್ಲ. ಅದನ್ನು ಗಾಂಧೀಜಿ ಕಂಡುಕೊಂಡರು. ಕವಿಯು ಗಾಂಧೀಜಿಯವರ ಜನನವು – 'ದ್ವಾರಕೆಯ ಬಳಿಯ ಮೂಡಣ ಮುನ್ನೀರ ತೀರ'ದಲ್ಲಾಯಿತು. ಮಹಾಪುರುಷರ ಜನನ – ಬಾಲ್ಯ ಹೆಚ್ಚಾಗಿ ಅಸಾಮಾನ್ಯವಾಗಿರುತ್ತದೆ. ಆದರೆ ಇವರು ಸಾಮಾನ್ಯರಲ್ಲಿಯೇ ಅತಿಸಾಮಾನ್ಯರಾಗಿ ಜನಿಸಿ, ಬೆಳೆದು, ಬಾಲ್ಯದಲ್ಲಿಯೇ ವಿವಾಹವಾಗಿ ವಿದ್ಯೆ ಕಲಿತು ಹೊಟ್ಟೆಪಾಡಿಗಾಗಿ ಆಫ್ರಿಕಾಕ್ಕೆ ಹೋಗುತ್ತಾರೆ. ಅಲ್ಲಿ ಬಿಳಿ ಜನರಿಂದ ಕರಿಜನರ ಶೋಷಣೆ ನಡೆಯುತ್ತಿರುವುದನ್ನು ಕಂಡು, 'ಕಡಲಿನಾಳದಿಂದೆದ್ದ ವೇದ ಪುರುಷನಂತೆ ಮೈದಳೆದು ಈ ನಾಡಿನಲ್ಲಿಯೂ ಆ ರೀತಿ ಶೋಷಣೆ ನಡೆಯುತ್ತಿರುವುದನ್ನು ಕಂಡು ಇಲ್ಲಿಗೆ ಮರಳಿ ಬಂದು ದೇಶದ ಸ್ವಾತಂತ್ರ್ಯ ಆಂದೋಲನದ ನೇತೃತ್ವ ವಹಿಸಿ ದೇಶವನ್ನು ಬ್ರಿಟಿಷರಿಂದ ಬಂಧ – ಮುಕ್ತ ಮಾಡಿದರು.

**'ಗಾಂಧಿಕಿರಣ'** – ಕವನದಲ್ಲಿ ಈ "ಪ್ರೀತಿಯೊಂದೆ ಎಲ್ಲ ನೀತಿ ವಿಶ್ವವಾಳ್ವ ರಾಣಿಯು" – ಎಂಬ ಸಂದೇಶವನ್ನು ಗಾಂಧೀಜಿಯವರನ್ನೇ ಅದರ ಪ್ರತಿಮೆ – ಪ್ರತೀಕವನ್ನಾಗಿ ಚಿತ್ರಿಸಿರುವರು. ಅಂದು ಜನರು ಪ್ರೀತಿ, ಮೋಹ, ಸ್ನೇಹದ ಹೆಸರಿನಲ್ಲಿ ಮೋಸ – ಸುಳ್ಳು ಮಾರ್ಗದಲ್ಲಿ ನಡೆಯುತ್ತಿದ್ದರು; ದೇಶದಲ್ಲೆಲ್ಲ ಕತ್ತಲೆ ಆವರಿಸಿತ್ತು. ಈ ಸಮಯದಲ್ಲಿ ಪ್ರೀತಿ ಪಥವ ಬೆಳಗಲು 'ಗಾಂಧಿ ಕಿರಣ'ವು ಭೂಮಿಗಿಳಿದು ಬಂದು "ಪ್ರೀತಿಯೊಂದೆ ಜಗದ ಸತ್ಯ, ಸತ್ಯವೆನ್ನ ಪ್ರೀತಿಯು" – ಎಂದು ಸಾರಿತು. ಪತಿತರ, ದಲಿತರ ನೋವು ನಲಿವುಗಳೇ ತನ್ನ ನೋವು – ನಲಿವುಗಳೆಂದು ತಿಳಿದು ಅವರ ನೋವು ಅಳಿದು, ನಲಿವು ಬೆಳೆಸುವದುದೇ ತನ್ನ ಬಾಳಿನ ಸಫಲತೆ ಎಂದು ಬಗೆದರು. ಹೀಗೆ ಮಾಡಲು ಇವರಿಗೆ ಅಹಿಂಸೆ, ಪ್ರೀತಿಗಳೇ ಜಪ – ಮಂತ್ರ ತಂತ್ರಗಳಾದವು. ಹೀಗೆ ಗಾಂಧಿ ಕಿರಣವು ಜಗತ್ತಿನಲ್ಲಿ ಇವುಗಳನ್ನು ಸಾರಿ ಜಗತ್ತನ್ನು ಬೆಳಗಿಸಿತು. ಮುಗಳಿಯವರು (ಇದೇ ಸಂಕಲನದ) **'ನೆನೆಕೆ'** – ಕವನದಲ್ಲಿಯೂ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ವೀರರಾದ ತಿಲಕ, ಸುಭಾಷಚಂದ್ರಬೋಸ್ ಹಾಗೂ ಇವರ ಜೊತೆಗೆ ಗಾಂಧೀಜಿಯವರನ್ನೂ ನೆನೆಸಿ ಅವರಿಗೆ ನಮಸ್ಕರಿಸಿರುವರು.

ಬೇಂದ್ರೆಯವರ **'ಜಯ ಜಯಾ ಗಾಂಧಿ ಮೋಹನಾ'** – ಕವನವು ಗಾಂಧೀಜಿಯವರ ವ್ಯಕ್ತಿತ್ವವನ್ನು ಬಣ್ಣಿಸುತ್ತದೆ. ಗಾಂಧೀಜಿಯವರು ಶಾಂತಿಗಾಗಿ ಕಾದಿರುವರು. ಅಂತೆಯೇ ಅವರಿಗೆ 'ಭೀಷ್ಮಮರಣ' ಬಂತೆಂದು ಮಹಾಭಾರತದ ಭೀಷ್ಮನು ಶರಶಯ್ಯೆಯಲಿ ಮಲಗಿ ಮರಣಿಸಿದ ರೂಪೋಪಮೆಯನ್ನು ಕೊಟ್ಟಿರುವರು. ಅವರ ಸಾವಿನ ಸುದ್ದಿಯನ್ನು ಹೀಗೆ ತಿಳಿಸಿದ್ದಾರೆ.

"ಒಡದರ ನಿಮ್ಮ ಒಡಲೋ
ಬಂತು ಸಿಡಿಲು
ರಣಬೊಬ್ಬಿ ನಿಮ್ಮ ಹೆಸರೊ"

(ದ.ರಾ.ಬೇಂದ್ರೆ, ಅರಳು ಮರಳು, ಪುಟ. ೧೭.)

ಮಾನವೋತ್ಕ್ರಾಂತಿಗೆ ಕಾರಣನಾದ, ಸ್ವಾತಂತ್ರ್ಯದೂತನಾದ, ಕವಿಗಳಿಗೆ ಪ್ರೇರಣೆಯಾದ ನಿನ್ನ ಕುರಿತು ಕರ್ನಾಟಕದ ಕವಿಗಳು ನಿನ್ನನ್ನು ಕನ್ನಡಿಸಿದರು. ನಿನ್ನನ್ನು ಕುರಿತು ಹಾಡಿದ್ದಾರೆ. ಕವಿ ತನ್ನ ಈ ಕವನವನ್ನು 'ಇಗೋ ಕವನ'ವೆಂದು ಅರ್ಪಿಸಿರುವರು. ಗಾಂಧೀಜಿಯವರ ನಿಷ್ಕಲ್ಮಶವಾದ ಹೃದಯ – ಮನಸ್ಸು – ಸಾಧನೆ ಸಿದ್ಧಿಗಳನ್ನು – ನಗಿ – ಬೆಳಕು, ಮಾತು – ಮಿಂಚಿನಗರಿ; ಕಾರ್ಯ – ಕಿರಿ ಬೆಳ್ಳಿನಾ ಸೆಲಿ ಎಂದು ಮುಂತಾದ ಪ್ರತಿಮೆ – ಸಂಕೇತಗಳ ಮೂಲಕ ವರ್ಗೀಕರಿಸಿರುವರು. ವೈರಿನ್ನು ಕೂಡ ಪ್ರೇಮದಿಂದ ಕಂಡರು. ಅಬಲೆಯರ, ಬಾಲಕರ ಶ್ರೇಯೋಭಿವೃದ್ಧಿಗಾಗಿ ಶ್ರಮಿಸಿದರು. ಭೇದವನ್ನು ಅಳಿದು ಭಾವೈಕ್ಯತೆ ಬೆಸೆದು ವಿಶ್ವ ಬಂಧುವಾದರು. ಗಾಂಧೀಜಿ ಇಟ್ಟ ಒಂದೊಂದು

ಅಡಿಯು ಮುಕ್ತಿಯ ಗಡಿಯಾಯಿತು. ರಾಮನಾಮದಲ್ಲಿಯೇ ಪ್ರೇಮವನ್ನು ಇಟ್ಟವರು. ಅವನ ಈ ತತ್ತ್ವ ಸಿದ್ಧಾಂತಗಳ ಬಟಾ ಬಯಲಿನ ರಾಜ್ಯ ಮೋಸದ (ಬ್ರಿಟೀಷರ) ಕೂಡ ವ್ಯಾಜ್ಯ ಹೂಡಿತು. ಇಂದು ಗಾಂಧೀಜಿಯವರ ಸ್ಮರಣೆಯೆಂದರೆ ಏನೆಂಬುದನ್ನು ಹೀಗೆ ಹೇಳಿರುವರು.

"ನಿಂ ಸ್ಮರಣ ಸ್ವರಾಜ್ಯದ ಹರಣಾ
ದೀನ ಉದ್ಧರಣಾ
ನಿಂ ಚರಣ ದಾಸ್ಯ ಸಂತರಣಾ
ದೃಷ್ಟಿ ವಿಸ್ತರಣಾ"

(ದ.ರಾ.ಬೇಂದ್ರೆ, ಅರಳು ಮರಳು, ಪುಟ. ೨೦.)

ವರ್ಷ – ವರ್ಷವೂ ನಾವು ಆಚರಿಸುವ ಅವರ ಜಯಂತಿ ಶ್ರದ್ಧೆಯ ಧನವಿದ್ದ ಹಾಗೆ, ಉಪ್ಪಿನ ಋಣ ತೀರಿಸಿದಂತೆ. ಅವರ ನೂಲಿನ ಚಕ್ರ ತಿರುಗಿದ ಹಾಗೆ ಕವಿಗಳು ಅವರನ್ನು ಕುರಿತ ಹಾಡಿಗೆ ಹೊಸ, ಹೊಸ ದಾಟಿ ಆವರಿಸುತ್ತದೆ. ಕವಿತೆಯಲ್ಲಿ ಅವರ ಗುಣ ಆಕಾರದ ಚುಕ್ಕಿಯ ಹಾಗೆ, ರೆಕ್ಕೆ ಪಡೆದ ಹಕ್ಕಿಯ ಹಾಗೆ ಕವಿಯ ಮುಂದೆ ಕುಣಿಯುತ್ತವೆ. ಹೀಗೆ ಬೇಂದ್ರೆಯವರು ಗಾಂಧೀಜಿಯವರಿಗೆ ಕವಿ ಹೃದಯದ ನಿರ್ಲಿಪ್ತ ಭಾವನೆಗಳನ್ನು ಈ ಕವನದಲ್ಲಿ ಅರ್ಪಿಸಿರುವರು.

ಪ್ರತಿಯೊಂದು ರಾಷ್ಟ್ರದ ಸಾಹಿತ್ಯ ಚರಿತ್ರೆಯ ಬೇರೆ ಬೇರೆ ಕಾಲಗಳಲ್ಲಿ ವಿಶಿಷ್ಟವಾದ ಧರ್ಮವನ್ನು ರೂಪಿಸಿಕೊಂಡಿರುವುದನ್ನು ನಾವು ಕಾಣಬಹುದು. ಅದೇ ರೀತಿ ನಮ್ಮ ದೇಶದಲ್ಲಿ ಅನೇಕ ಕಾರಣಪುರುಷರು ಹುಟ್ಟಿ ದೇಶದ ಚರಿತ್ರೆಗೆ ಮಹತ್ತರವಾದ ತಿರುವುಗಳನ್ನು ನೀಡಿರುವುದನ್ನು ನೋಡಬಹುದು. ನಮ್ಮ ದೇಶ ಸ್ವಾತಂತ್ರ್ಯಪೂರ್ವದಲ್ಲಿ ಕಂಡುಕೊಂಡ ಮಹಾನ್ ವ್ಯಕ್ತಿ ಮಹಾತ್ಮ ಗಾಂಧೀಜಿಯವರು. ಸತ್ಯ, ಅಹಿಂಸೆ, ನ್ಯಾಯ, ನೀತಿ ಮುಂತಾದ ಮೌಲ್ಯಗಳ ಮೂಲಕ ಸ್ವಾತಂತ್ರ್ಯ ದೊರಕುವಂತೆ ಮಾಡಿದವರು. ಇಂತಹ ಚೇತನ ನವೋದಯದ ಕವಿಗಳ ಮೇಲೆ ಬೀರಿದ ಪ್ರಭಾವ ಗಾಢವಾದುದು. ಹೆಚ್ಚಿನವರೂ ಗಾಂಧೀಜಿಯವರ ತತ್ತ್ವಾದರ್ಶಗಳಿಗೆ ಮಾರು ಹೋದವರು. ಕಯ್ಯಾರರೂ ಇದಕ್ಕೆ ಹೊರತಲ್ಲ ಸ್ವತಃ ಸ್ವಾತಂತ್ರ್ಯ ಹೋರಾಟಗಾರರೂ ಆದ್ದರಿಂದ ಗಾಂಧೀಜಿಯ ಮೇಲಿನ ಅಭಿಮಾನದಿಂದ 'ಗಾಂಧಿದರ್ಶನ', 'ಗಾಂಧೀಜಿಗೆ', 'ಹೇ ರಾಮ್', ಕಾಲಾತೀತ' ಕವನಗಳನ್ನು ರಚಿಸಿದ್ದಾರೆ. ಜೊತೆಗೆ ರಾಷ್ಟ್ರನಾಯಕರ ಗುಣಗಳನ್ನು ಕವನಗಳಲ್ಲಿ ಬಿಂಬಿಸಿ ಕಟ್ಟಿರುವ ವ್ಯಕ್ತಿಚಿತ್ರಮಾಲೆಗಳನ್ನು ರೈ ಅವರು ರಚಿಸಿದ್ದಾರೆ.

ರೈಯವರು ಬಾಲ್ಯದಿಂದಲೆ ಗಾಂಧೀಜಿಯವರ ಆಕರ್ಷಕ ವ್ಯಕ್ತಿತ್ವ ಪ್ರಭಾವಕ್ಕೊಳಗಾಗಿ ಖಾದಿ ಧರಿಸಿ ಅಪ್ಪಟ ಗಾಂಧೀವಾದಿಗಳಾದವರು. ಶತಮಾನಗಳ ತಪೋಬಲದಿಂದಾಗಿಯೇ ಗಾಂಧೀಜಿಯ ಅವತಾರವಾಯಿತು. ಭಾರತೀಯರ ಸೌಭಾಗ್ಯ ಬೆಳಗಿತು, ಗಾಂಧೀಜಿಯಿಂದ ಸರ್ವಾಂಗದಭ್ಯುದಯ

ಸಾಧನೆಯಾಯಿತು ಎಂದು ಹೆಮ್ಮೆಯಿಂದ ಹೇಳುವ ರೈಗಳು ಗಾಂಧೀ ಸ್ಫೂರ್ತಿಯಿಂದ 'ಹೇ ರಾಮ, ಗಾಂಧೀ ದರ್ಶನ' ಎಂಬ ಕವನಗಳನ್ನು ಬರೆದಿದ್ದಾರೆ. ಕಾಲಾತೀತ ಕವನದಲ್ಲಿ ಸಹ ಗಾಂಧೀಜಿಯ ಗುಣಗಾನವನ್ನು ಮಾಡಿದ್ದಾರೆ.

**'ಗಾಂಧೀಜಿಗೆ'** ಎಂಬ ಸುನೀತವನ್ನು ಗಾಂಧೀಜಿಯ ಹುಟ್ಟುಹಬ್ಬದಲ್ಲಿ ಹಾಡುಕಟ್ಟಿ ಹಾಡಿದ್ದಾರೆ. ಬ್ರಿಟಿಷರ ಕಪಿಮುಷ್ಠಿಯಿಂದ ಭಾರತವನ್ನು ಬಿಡುಗಡೆಗೊಳಿಸಿದವರೇ ಗಾಂಧೀಜಿ ಎಂಬ ವಿಚಾರವನ್ನು ಸುನೀತದ ಮೊದಲೆಂಟು ಸಾಲುಗಳು ತಿಳಿಯಪಡಿಸುತ್ತವೆ. ಶತಶತಮಾನಗಳ ತಪಸ್ಸಿನ ಫಲವೋ ಎಂಬಂತೆ ಭಾರತೀಯ ಸೌಭಾಗ್ಯ ಬೆಳಗಿತು. ಸತ್ಯ ನಿರ್ಮಲ, ಶಾಂತಿಮೂರ್ತಿಯಾಗಿ ಗಾಂಧಿಯು ರೂಪ ತಳೆದು ಭಾರತೀಯರ ಬದುಕನ್ನು ಬೆಳಗಿಸಿದರೆಂದು ಹಾಡುತ್ತಾರೆ.

ಅಸ್ತೇಯ – ಶುದ್ಧಿ – ದಯೆ ಸ್ಥಿರ ಸತ್ಯವ್ರತಗಳಿಗೆ
ಸಿದ್ಧಿಗೊಂಡಿವ ನಿಮ್ಮ ಜೀವ ಪಾವನವಾಯ್ತು
ಹೆತ್ತೊಡಲಿಗಮೃತ ಸಿಂಚನವಾಯ್ತು ನಿಮ್ಮಿಂದ
ರಾಷ್ಟ್ರ ಸರ್ವಾಂಗದಭ್ಯುದಯ ಸಾಧನೆಯಾಯಿತು"

(ಶತಮಾನದ ಗಾನ, ಪುಟ. ೨೪೦)

ಎಂದು ಮಹಾತ್ಮರನ್ನು ಸ್ತುತಿಸುತ್ತಾರೆ. ದರ್ಪದಿಂದ ಕೊಬ್ಬಿದ ಸ್ವಾರ್ಥಸಾಧಕರು ಪಶ್ಚಿಮ ರಾಷ್ಟ್ರಗಳಲ್ಲಿ ಜನರನ್ನು ಪೀಡಿಸುತ್ತಿದ್ದಾರೆ. ಗತಿಯಿಲ್ಲದೆ ಜನರು ದಿಕ್ಕೆಟ್ಟು 'ಇದನ್ನೆಲ್ಲಾ ಪರಿಹರಿಸಲು ಭಾರತದಲ್ಲಿ ಶಾಂತಿ ಸಮಾನತೆಗಳನ್ನು ತುಂಬಲು ಪ್ರಯತ್ನಿಸಿದ ಗಾಂಧೀಜಿಯವರೇ ನಮಗೆ ಗತಿ' ಎಂದು ಕೂಗುತ್ತಿದ್ದಾರೆ ಎಂದು ಕವಿಯು ಸೂಚಿಸಿದ್ದಾರೆ.

ಗಾಂಧೀಜಿಯವರನ್ನು ಪ್ರಥಮ ಸಲ ಕಂಡಾಗ ಅಭಿಮಾನಗೊಂಡು ಕವಿ **'ಗಾಂಧೀ ದರ್ಶನ'** ಎಂಬ ಕವನವನ್ನು ರಚಿಸಿದ್ದಾರೆ. ಸರಳ ಜೀವನದಿಂದ ಸವೆದ ಮೂರ್ತಿ ಲೋಕದಲ್ಲೆಲ್ಲ ನಿನ್ನದೇ ಕೀರ್ತಿ, ನೀನೆ ನಿತ್ಯಯೋಗಿ, ಕರ್ಮಧರ್ಮ ಯೋಧ, ಪತಿತ ಪಾವನ ಶಕ್ತಿ, ಶುದ್ಧ ಸಾತ್ವಿಕ ಭಕ್ತಿ ಎಂದು ಕೊಂಡಾಡುತ್ತಾರೆ.

ತೇದ ಶ್ರೀ ಚಂದನದ
ತಿರುಳಿನಿಂದ ತಿರು ತಿರುಗಿ
ಬರದೆ ಕಂಪು?
ಕಾಯಕಿದುವೆ ಪೆಂಪು

(ಶ್ರೀಮುಖ, ಪುಟ. ೩೬)

ಎಂದು ಮುಂದುವರಿದು

ಈ ಪೂಜ್ಯ ಚರಣಗಳ ಪುಣ್ಯ ಸ್ಪರ್ಶದಿಂದ
ಬಂಡೆಯೊಡೆದು ಹಾಲು ಸುರಿದು ಬಹುದು!" (ಶ್ರೀಮುಖ, ಪುಟ. ೩೯)

ಎಂದು ಕವಿ ಮಹಾತ್ಮರ ದರ್ಶನ ಕುರಿತು ಪಾವನವಾದೆನೆಂದು ಹೇಳುತ್ತಾರೆ. ಕಡೆಯಲ್ಲಿ ತಮದಿಂದ ಜ್ಯೋತಿಗೆ, ಮೃತ್ಯುವಿನಿಂದ ಅಮೃತಕ್ಕೆ ವಿಶ್ವವನ್ನೇ ಗಾಂಧೀಜಿ ಸಾಗಿಸುವನೆ? ಎಂದು ಕೇಳುತ್ತಾರೆ. ಇಲ್ಲಿ **"ಗಾಂಧೀಜಿ"**ಯೇ ಎಲ್ಲದಕ್ಕೂ ಸರ್ವಶಕ್ತ ಎಂದು ಹಾಡಿರುತ್ತಾರೆ.

ಸ್ವಾತಂತ್ರ್ಯದ ಸಂದರ್ಭದ ನವೋದಯ ಕವನಗಳಲ್ಲಿ ಗಾಂಧೀಜಿಯವರನ್ನು ಅಭೂತಪೂರ್ವವಾಗಿ ಚಿತ್ರಿಸಿದ ಕವಿಯೆಂದರೆ ಕುವೆಂಪು. ಕುವೆಂಪು ಅವರಿಗೆ ಗಾಂಧೀಜಿ ಸ್ವಾತಂತ್ರ್ಯಶಿಲ್ಪಿಯಾಗಿ ಗೋಚರಿಸುತ್ತಾರೆ. ೧೯೩೪ರಲ್ಲಿ ಗಾಂಧೀಜಿಯವರು ಮೈಸೂರಿಗೆ ಭೇಟಿ ನೀಡಿದಾಗ ಅವರ ದರ್ಶನ ಪಡೆಯಲು ಹಾಗೂ ಅವರ ಮಾತುಗಳನ್ನಾಲಿಸಲು ನೆರೆದ ಜನ ಸಮೂಹದ ದೃಶ್ಯ ಕುವೆಂಪು ಅವರಿಗೆ ಸತ್ವಯುತವಾದ ಸರಳ ರಗಳೆಯ ಈ ಸಾಲುಗಳನ್ನು ರಚಿಸಲು ಸ್ಫೂರ್ತಿ ನೀಡಿತು.

ದಶದಶ ಸಹಸ್ರಜನ ಕಿಕ್ಕಿರಿದು
ನೆರೆದಿಹುದು ಬಿಸಿಲಿನಲಿ, ಮಾನವ ಮಹಾತ್ಮನಿಗೆ
ಗೌರವಾರಾಧನೆಯ ನೈವೇದ್ಯವನು ಸಲಿಸೆ!

..............................................................................

ಅನೆಯಂಬಾರಿಗಳ ರಾಜರೈಸಿರಿಯಲ್ಲಿ
ಇವನು ಸುಂದರನಲ್ಲ; ಯುವಕನಯಾ ಅಲ್ಲ
ಮುದುಕನಾಗಿಹನು ; ..................................

ಆದರೂ ದರ್ಶನಕೆ ಮುತ್ತಿಹರು ಮಾನವರು
ಜೇನು ಹುಟ್ಟಿಗೆ ಜೇನುಹುಗಳು ಕವಿಯುವಂದದಲಿ

(ಬಾಪು ಕಾವ್ಯಾಂಜಲಿ. ೪೩–೪೪)

ಎಂದು ಗಾಂಧೀಜಿಯ ಸಮಸ್ತ ಚಿತ್ರಣವನ್ನು ಆಕರ್ಷಣೀಯವಾಗಿ ಸ್ವಾತಂತ್ರ್ಯ ಭೈರವನಾಕ್ಕು, **'ಸಭ್ಯತಾ ದೇವತೆ'** ಕವನದಲ್ಲಿ ಚಿತ್ರಿಸಿದ್ದಾರೆ.

ಜನಮನದ ಹಗೆತನದ ರೋಷ ಹಾಲಾಹಲದಿ ಹಾಲುದಿಸಿ ಬರುವಂತೆ – ಮೂಡಿ ಬಂದವರು ಗಾಂಧೀಜಿ ಎಂದು ಚಿತ್ರಿಸುವ ಕವನ **ಸ್ವಾತಂತ್ರ್ಯಶಿಲ್ಪಿ**. ಇಲ್ಲಿ ಕವಿ ಗಾಂಧಿಯನ್ನು ಪರಿಚಯಿಸುವ ಬಗೆ ಅಸಾಧಾರಣವಾದುದೇ ಆಗಿದೆ.

ಮರೆವುದೆಂತಾ ನಮ್ಮ ಸ್ವಾತಂತ್ರ್ಯಶಿಲ್ಪಿಯಂ
ದಿವ್ಯ ದಿನದೀ ಶುಭ ಮುಹೂರ್ತದಲ್ಲಿ?
ಮರೆವುದೆಂತಯ್ ಭುವನ ಗೌರವ ಮಹಾತ್ಮನು
ಸ್ವಾತಂತ್ರ್ಯದೀ ಸುಪ್ರಭಾತದಲ್ಲಿ?
ಹೆಜ್ಜೆ ಹೆಜ್ಜೆಯನಿದೆಸಿ ಕೈ ಹಿಡಿದು ನಡೆ ನಲಿಸಿ
ಬಿಡುಗಡೆಗೆ ತಂದ ಆ ತಂದೆಯಲ್ಲಿ?
ಎಲ್ಲಿ! ಓ! ಅವನೆಲ್ಲಿ? ನಿಚ್ಚವೂ ನಮ್ಮೆದೆಯ
ನಂಜೀಂಟುವಾ ನೀಲಕಂಠನೆಲ್ಲಿ?

(ಗಾಂಧಿ ಎಂಬುವ ಹೆಸರು. ಪುಟ. ೩೧)

ಎಂದು ಸ್ವಾತಂತ್ರ್ಯಶಿಲ್ಪಿಯನ್ನು ವರ್ಣಿಸಿದ್ದಾರೆ. ಕ್ರಿಸ್ತಬುದ್ಧರ ಮೈತ್ರಿಯನು ಸಾಧಿಸುತ ವಿಶ್ವಸೇವಕರ ಪಂಕ್ತಿಯಲ್ಲಿ ನಿಂದವರು ಗಾಂಧೀಜಿ. ಎಲ್ಲಕ್ಕಿಂತ ಮಿಗಿಲಾಗಿ ಯಂತ್ರ ನಾಗರಿಕತೆಯ ರಾಜಕೀಯದ ಕುಟಿಲತಂತ್ರಳಿಗೆ ಅಧ್ಯಾತ್ಮ ಮಂತ್ರವನು ತಂದ ಭಾರತದ ತಂದೆ ಗಾಂಧೀಜಿ!

ಅವರನ್ನು ಕುವೆಂಪು ನಮ್ಮ ರಾಷ್ಟ್ರದ ಅದ್ವಿತೀಯ ಕರ್ಮಯೋಗಿ; ಅನುಪಮ ದಿವ್ಯಜ್ಞಾನಿ; ಅನನ್ಯ ರಾಷ್ಟ್ರಪ್ರೇಮಿ, ಉಜ್ವಲ ಅಧ್ಯಾತ್ಮಜೀವಿ; ನೋಡಲು ಹಾಲು ಹಸುಳೆಯ ಮಂದಹಾಸದ ಮುಗ್ಧ ಮಗುವಿನಂಥವರಾದರೂ; ವ್ಯಕ್ತಿತ್ವದಲ್ಲಿ ಹಿಮಾಲಯದೆತ್ತರ ಮೀರಿ ಬೆಳೆದವರು ಮತ್ತು ಜನಮನದಾಳದಲ್ಲಿ ಉಳಿದವರು.

ಗಾಂಧೀಜಿ ಕೇವಲ ಭಾರತೀಯರಿಗಷ್ಟೇ ಪ್ರಿಯರಲ್ಲಾ, ಜಗದ ಜನಕ್ಕೇ ಪ್ರಿಯರು. ಎಲ್ಲ ಕಾಲದೆ! ಎಲ್ಲ ದೇಶದ ಎಲ್ಲ ಜನರ ಎದೆಗಳಲಿ ಹರಿದಿರುವ ಒಲವು ಒಂದೇ ಎಂದು ವಿಶ್ವಕ್ಕೆ ಸಾರಿದ ಶಾಂತಿದೂತ – ಗಾಂಧಿ – ತಾತ ಎಂದು ಕವಿ ವಿಶೇಷವಾಗಿ ಚಿತ್ರಿಸಿದ್ದಾರೆ.

ಕುವೆಂಪು ಅವರು (ಕೃತ್ತಿಕೆ ಸಂಕಲನ) **'ಮಹಾತ್ಮಗಾಂಧಿ'** ಕವನದಲ್ಲಿ (೧೧.೦೩.೧೯೩೧ರಲ್ಲಿ ರಚಿಸಿದ್ದು) ಸ್ವಾತಂತ್ರ್ಯ ಚಳುವಳಿಯಲ್ಲಿಯ ಗಾಂಧೀಜಿಯವರ ಪಾತ್ರ ಪ್ರಭಾವವನ್ನು, – "ಈ ಮಹಾ ಸ್ವಾತಂತ್ರ್ಯ ರಣಯಾಗ, ಭೂಮಿಯಲಿ ಶ್ವೇತಾಗ್ನಿ ಜ್ವಾಲೆಯೊಂದುರಿಯುತಿದೆ" – ಎಂಬ ಭವ್ಯ – ದಿವ್ಯ ಕಲ್ಪನೆಯ ರೂಪಕವನ್ನೇ ಕೊಟ್ಟಿರುವರು. ಅವರು ಶಾಂತಿಯಲ್ಲಿ ಹಿಮಾಲಯದಂತೆ, ಆಕಾಶದಲ್ಲಿ ಹೊಳೆಯುವ ನಕ್ಷತ್ರದಂತೆ, ವಿಶ್ವವನ್ನೇ ಕಂಪನ ಮಾಡುವ ಧರ್ಮದ ಬಲವೇ ಮೂರ್ತಿವೆತ್ತಂತೆ ಜನಿಸಿ, ಭೂಮಿಯನ್ನು ಪಾವನಗೊಳಿಸಿದನೆಂದು ವರ್ಣಿಸಿರುವರು. ಗಾಂಧೀಜಿಗೆ

"ಓ ಮಹಾತ್ಮನೆ, ನಿನ್ನ ಸಾನ್ನಿಧ್ಯ ತೀರ್ಥದಲ್ಲಿ
ಮಾನವನ ಮೋಹಮದ ಮಾತ್ಸರ್ಯಗಳು ಮಿಂದು
ಪ್ರೇಮದಿ ಪುನೀತವಾಗಿಹವು! ಸುಮೂಹರ್ತದಲಿ"

(ಕುವೆಂಪು, ಕೃತ್ತಿಕೆ, ಪುಟ. ೭೬.)

ಅಂದು ಧರ್ಮದಲ್ಲಿ ವಿಶ್ವಾಸವನು ಕಳೆದುಕೊಂಡು ಮೋಹ, ಮದ, ಮಾತ್ಸರ್ಯಗಳು ತುಂಬಿದ ನಮ್ಮನ್ನು ನಿಮ್ಮ ಪ್ರಚ್ಛನ್ನ ಕಲ್ಕಿಯಾಗಿ ದೃಢಭಕ್ತಿಯನ್ನು ನಮಗೆ ಕೊಟ್ಟು ಕಾಪಾಡಿದೆವೆಂದು ವರ್ಣಿಸಿರುವರು. ಇನ್ನೊಂದೆಡೆ ಸ್ವಾತಂತ್ರ್ಯೋತ್ಸವದ ಶುಭ ಸಂದರ್ಭದಲ್ಲಿ ಬಿಡುಗಡೆಗೆ ತಂದು ಕೊಟ್ಟ ಆ ತಂದೆಯನ್ನು ಹೀಗೆ ಸ್ಮರಿಸಿದ್ದಾರೆ.

"ಮರೆವುದೆಂತು ನಮ್ಮ ಸ್ವಾತಂತ್ರ್ಯ ಶಿಲ್ಪಿಯಂ
ದಿವ್ಯ ದಿನದೀ ಶುಭ ಮುಹೂರ್ತದಲ್ಲಿ?
ಮರೆಯುವದೆಂತಯ್ ಭುವನ ಗೌರವ ಮಹಾತ್ಮನಂ
ಸ್ವಾತಂತ್ರ್ಯದೀ ಸುಪ್ರಭಾತದಲ್ಲಿ?"

(ಡಾ. ಹೊ. ಶ್ರೀನಿವಾಸಯ್ಯ, ಸಾಹಿತ್ಯ ಲೋಕದಲ್ಲಿ ಮಹಾತ್ಮಗಾಂಧೀ, ಪುಟ. ೫೫.)

ಎಂದು ಆ ದಿನವನ್ನು ನೆನೆಸಿರುವರು. ಸ್ವಾತಂತ್ರ್ಯೋದಯದ ಉತ್ಸವದ ಸಂದರ್ಭದಲ್ಲಿ ಗಾಂಧೀಜಿಯವರು ಅಲ್ಲಿ (ದಿಲ್ಲಿಯಲ್ಲಿ) ಪಾಲ್ಗೊಳ್ಳದೇ ಮತೀಯ ಗಲಭೆಗೆ ಪೀಡಿತರಾದವರನ್ನು ಸಾಂತ್ವನಗೊಳಿಸಲು ತೆರಳಿದ್ದನ್ನು ಈ ಕವನ ಸಂಕೇತಿಸಿರುತ್ತದೆ.

ಡಿ.ಎಸ್. ಕರ್ಕಿ ಅವರು **'ನಿಂತಿರುವ ಗಾಂಧೀಜಿ'** ಕವನದಲ್ಲಿ ಇಂದು ನಮ್ಮ ಅಂತರಂಗದಲ್ಲಿ ಗಾಂಧೀಜಿ ಯಾವುದರ ಸಂಕೇತ, ರೂಪವಾಗಿ ನಿಂತಿರುವರೆಂದು ವರ್ಣಿಸಿರುವರು. ವಿಶ್ವದ ಅಂತರಂಗದಲ್ಲಿ ಸತ್ಯದ ದೀಪವಾಗಿ, ಕರುಣೆಯ ರೂಪವಾಗಿ, ಶ್ರದ್ಧೆಯ ಗೀತವಾಗಿ ನಿಂತಿರುವರು. ನಮ್ಮ ಅಂತರಂಗದಲ್ಲಿ ದಲಿತರ ಕಂಬನಿಯೊರೆಸಿ ಘನತೆಯಲಿ ಮನಸ್ಸನ್ನು ನಿಲ್ಲಿಸಿ ನಿಂತಿರುವಂತೆ ಕವಿಗಳ ಅಂತರಂಗದಲ್ಲಿ ನವರಾಷ್ಟ್ರದ ಮಾನವರಾಗಿ ಜಗದೈಕ್ಯದ ಗಾನವಾಗಿ ನಿಂತಿರುವರು. ಅಂತರಾತ್ಮದಲ್ಲಿ ಸದಾ ಕರ್ಮಯೋಗದಲ್ಲಿ ನಿರತರಾಗಿ ಸಮದೃಷ್ಟಿ ಹೊಂದಿದ, ಉದಾತ್ತ ಚರಿತೆಯ, ಸಮಚಿತ್ತದಲಿ ಆನಂದಭರಿತರಾಗಿ ನಿಂತಿರುವರು. ಚಿತ್ತ ಭೂಮಿ ಎಂಬ ಆಕಾಶದಲ್ಲಿ ಮಾನವತೆಯ ಮೇರುವಾಗಿ, ಸಜ್ಜನಿಕೆಯ ಸಾರವಾಗಿ, ಸದ್ಭಾವದ ತೀರವಾಗಿ ನಿಂತಿರುವರು. ಜಗದ ಪೀಠದಲ್ಲಿ ಧವಳ ಕೀರ್ತಿಯ ಮೂರ್ತಿಯಾಗಿ, ಆತ್ಮವಿಕಸದ ಸ್ಫೂರ್ತಿಯಾಗಿ, ನೀತಿ ಪಥದಲ್ಲಿ ವಿಮಲ ಜ್ಯೋತಿಯಾಗಿ ನಿಂತಿರುವರು. ನಮ್ಮ ಅಂತರಂಗದಲ್ಲಿ ಸತ್ಯವನ್ನು ಎಂದೂ ಮರೆಯದಂತೆ, ದಯವನೆಂದು ತೊರೆಯದಂತೆ, ಶ್ರೇಷ್ಠತೆಗೆ ಮನಸ್ಸನ್ನು ತೆರೆಯುವಂತೆ ನಿಂತಿರುವರು.ಹೀಗೆ ಗಾಂಧೀಜಿ ಯಾವುದರಲ್ಲಿ ಯಾವುದರ ಪ್ರತಿರೂಪವಾಗಿ ನಿಂತಿರುವರೆಂದು ವರ್ಣಿಸಿರುವರು.

ಗಾಂಧೀಜಿಯವರನ್ನು ಹತ್ತಿರದಿಂದ ಕಂಡವರು, ಅವರ ಸಮಕಾಲೀನರೂ ಅವರ ಬಗ್ಗೆ ಅಪಾರ ಗೌರವವನ್ನು ಹೊಂದಿದ್ದ ಟಿ.ಪಿ. ಕೈಲಾಸಂ ಅವರು ಗಾಂಧೀಜಿ ಕುರಿತು ಇಂಗ್ಲಿಷ್‌ನಲ್ಲಿ ಕವನ ರಚಿಸಿದ್ದಾರೆ. ಇದನ್ನು ಜಿ.ಪಿ. ರಾಜರತ್ನಂ ಅವರು – **'ಬಾಪೂ ಕೈಲಾಸಂ ಕಂಡಂತೆ'** –

ಎಂದು ಕನ್ನಡಕ್ಕೆ ಅನುವಾದಿಸಿದ್ದಾರೆ. ಇದರಲ್ಲಿ ಅವರ ಕೃಶವಾದ ದೇಹ, ಹೃದಯ ವೈಶಾಲ್ಯ ನಿಷ್ಕಲ್ಮಷದ ಮನಸ್ಸು, ಮುಗ್ಧ ನಗೆ, ಸರಳ ಜೀವನ – ಮುಂತಾದವುಗಳ ಅವರ ವ್ಯಕ್ತಿ ಚಿತ್ರಣಗಳನ್ನು ಹೀಗೆ ಕೊಟ್ಟಿರುವರು.

"ಬರೀ ಹಿಡಿಯಷ್ಟು ಮೂಳೆ ಚರ್ಮ
ಒಂದು ಔನ್ಸ ರಕ್ತ ಮಾಂಸ ತುಂಬಿ
ಸಮುದ್ರದ ಉಬ್ಬರದಂತೆ ಉಕ್ಕುವ ಹೃದಯ ಜೋಡಿಸಿ
ಪಾಪರಹಿತ ಮನಸ್ಸು ತುಂಬಿ
ಆನೆಯ ಕಿವಿ, ಹಸುಗೂಸಿನ ನಗೆ,
ಮೇರುಗಿರಿಯ ಆತ್ಮ ಸೇರಿಸಿ
ಮೇಕೆ ಹಾಲು, ಖರ್ಜೂರ, ಅವರೆಕಾಳುಗಳನ್ನು ಕೊಡಿ
ನೊಂದ ಜೀವಿಗಳ ಕಣ್ಣೀರಿನಿಂದ ಮುಚ್ಚಿರಿ

(ದಲಿತ ಲೋಕೋದ್ಧಾರಕ ಬಾಪೂ ಕೆ.ಜಿ. ವಿರೂಪಾಕ್ಷಪ್ಪ, ಬಾಪೂ ಕೈಲಾಸಂ ಕಂಡಂತೆ, (ಲೇಖನ) ದಿನಾಂಕ : ೩೦.೦೯.೨೦೦೧ರ ವಿಜಯ ಕರ್ನಾಟಕ ದಿನಪತ್ರಿಕೆಯ ಸಾಪ್ತಾಹಿಕ ವಿಜಯ ಭಾಗದ ಪುಟ. ೧.)

ಮೂಡಿ ಬರುತ್ತಾನೆ .ಎಂದು ಗಾಂಧೀಜಿಯವರ ವ್ಯಕ್ತಿತ್ವದ ರೂಪವನ್ನು ಕಲ್ಪಿಸಿಕೊಳ್ಳಲು ಹೇಳಿರುವರು.

ಪು.ತಿ. ನರಸಿಂಹಾಚಾರ್ಯರು (ಗಣೇಶ ದರ್ಶನ ಸಂಕಲನದ) **'ನಾಡಿನಕ್ಕರೆ'** ಎಂಬ ದೀರ್ಘವಾದ ಕವನದ ಮುಂಜಾನೆಯ ಮುನ್ನೀರು ಭಾಗದ ಕೊನೆಯಲ್ಲಿ, ಗಾಂಧೀಜಿಯವರು ಜನಿಸಿದುದನ್ನು ಭಾರತವನ್ನು ಬಿಡುಗಡೆಗೊಳಿಸಲು ಬಂದ "ದೇವತಾ ಪುರುಷನ" ಅವತಾರವೆಂದು ಬಣ್ಣಿಸಿರುವರು. ಈ ದೇವತಾ ಪುರುಷನ ಆಗಮನಕ್ಕಿಂತ ಮುಂಚೆ ದೇವದೂತರು ಶುಚಿಗೊಳಿಸಲು ಬರುವಂತೆ, ರಾಜಾರಾಮ ಮೋಹನರಾಯ, ರಾಮಕೃಷ್ಣ ಪರಮಹಂಸ, ವಿವೇಕಾನಂದ, ಗೋಖಲೆ – ಮೊದಲಾದ ನಾಯಕರು ಜನಿಸಿದರು. ಕೊನೆಗೆ ದೇವತಾ ಪುರುಷರು 'ಕೃಷ್ಣ ನಿರ್ಯಾಣವನು ಕಂಡ ನಾಡು' ಸಾಗರ ತೀರದ ಪೋರಬಂದರಿನಲ್ಲಿ ಅವತರಿಸಿದನೆಂದು, ಗಾಂಧೀಜಿಯವರು ಶ್ರೀಕೃಷ್ಣನ ಅವತಾರವೆಂಬ ಕಲ್ಪನೆ ಕೊಟ್ಟಿರುವರು. ಹೀಗೆ ವೈಷ್ಣವ ದರ್ಶನವನ್ನು ಇವರ ವ್ಯಕ್ತಿತ್ವದಲ್ಲಿ ಕಂಡಿರುವರು. ಇದೇ ರೀತಿ ಇನ್ನು ಹಲವಾರು ಕವನಗಳಲ್ಲಿ ವೈಷ್ಣವದರ್ಶನದ ಹಿನ್ನೆಲೆಯಲ್ಲಿ ಅವರ ವ್ಯಕ್ತಿತ್ವದ ಚಿತ್ರಣವನ್ನು ಕೊಟ್ಟಿರುವರು. (ಗಣೇಶ ದರ್ಶನ ಸಂಕಲನದ) 'ನೆರಳು' ಕವನದಲ್ಲಿ ಗಾಂಧೀಜಿಯವರ ಪ್ರಭಾವವನ್ನು ಹಾರುವ ಗರುಡನ ನೆರಳಿಗೆ ಹೋಲಿಸಿ ವರ್ಣಿಸಿರುವರು. ಮೇಲೊಂದು (ಆಕಾಶದಲ್ಲಿ) ಗರುಡ ಹಾರುತ್ತಿದೆ. ಅದರ ನೆರಳು ಕೆಳಗಡೆ ನೆಲ ಮೇಲೆ ಮನೆ,

ಕೊಳ, ಬಾವಿ, ಗಿಡ, ಬೆಟ್ಟ, ತಗ್ಗು, ದಿನ್ನೆ ಎನ್ನದೇ ಎಲ್ಲಾ ಕಡೆ ಓಡುತ್ತಿದೆ. ಗರುಡಕ್ಕೆ ಅದರಿಚ್ಚೆಯೇ ಹಾದಿ. ಆದರೆ ಅದರ ನೆರಳಿಗೆ ಅದು ಹರಿದತ್ತವೇ ಬೀದಿ. ಇದರ ವೇಗಕ್ಕೆ ಗಾಳಿಯೇ ಬೆರಗಾಗಿದೆ. ಇದಕ್ಕೆ ಅಡ್ಡಿಮಾಡುವದು ಸಾಧ್ಯವಿಲ್ಲಾ. ಕವಿ ಈ ನೆರಳನ್ನು ನೋಡಿ –

"ಇದನೋಡಿ ನಾನು ನೆನೆವಿನಿಂದು
ಇಂಥ ನೆಳಲೇನು ಗಾಂಧಿಯೆಂದು!
ಹರಿದತ್ತ ಹರಿಯ ಚಿತ್ತ
ಈ ಧೀರ ನಡೆವನತ್ತ"

(ಪು.ತಿ. ನರಸಿಂಹಾಚಾರ್ಯ, ಸಮಗ್ರ ಕವನಗಳು, ಪುಟ. ೨೨೨.)

– ಹೀಗೆ ಈ ಕವನದಲ್ಲಿ ಗಾಂಧೀಜಿಯವರಿಗೆ ಸಂಬಂಧಿಸಿದ ಯಾವ ವಿಷಯವನ್ನು ಸ್ಪಷ್ಟವಾಗಿ ಹೆಸರಿಸದಿದ್ದರೂ ಕೊನೆಗೆ ನೆರಳೇ ಗಾಂಧಿಯೆಂದು ಸೂಚಿಸಿರುವರು. ಇದು ಅಂದು ಗಾಂಧೀಜಿಯವರ ಬದುಕೇ ಲೋಕ ವಿಲಕ್ಷಣವಾಗಿ ತೋರುತ್ತಿದ್ದುದನ್ನು ಸೂಚಿಸುತ್ತದೆ. ಚರಕದಿಮದಲೇ ಸ್ವರಾಜ್ಯ, ರಾಮನಾಮದಿಂದಲೇ ಸ್ವಾತಂತ್ರ್ಯ – ಇವರ ಸಾದಾ ಸರಳ ಬದುಕಿನ ಉಪದೇಶ, ತತ್ತ್ವಗಳು, ಒಂದು ಬಲಿಷ್ಠ ರಾಷ್ಟ್ರದ ವಿರುದ್ಧ ಹೋರಾಡಲು ಸಮರ್ಥವೇ – ಇವುಗಳನ್ನೆಲ್ಲಾ ಚಿಕ್ಕ ಕವನ ಕವಿಯ ವೈಷ್ಣವ ದರ್ಶನದ ಹಿನ್ನೆಲೆಯಲ್ಲಿ ಪ್ರತಿಮಿಸುತ್ತದೆ.

**'ಭಾರತ ಭೂಮಿ'** (ಗಾಂಧಿ ನೆನಪು) ಕವನದಲ್ಲಿ ಗಾಂಧೀಜಿಯನ್ನು ನೆನೆಸಿಕೊಂಡಿರುವರು. ಇಂದು ದೇಶದ ಜನತೆಯು ಅಂಧಕಾರ, ಅಹಂಕಾರ ಸ್ವವೃತ್ತಿಯಲ್ಲಿ ತೊಡಗಿದ್ದಾರೆ. ನಾಡು ಮತ್ತೆ ಮೊದಲಿನಂತಾಗುತ್ತದೆ. ಅದಕ್ಕಾಗಿ ಕವಿ ಭಾರತ ಮಾತೆಗೆ ಗಾಂಧೀಜಿಯವರನ್ನು ನೆನೆಯಲು –

"ನೆನೆ ಇಂದೆಲೆ ತಾಯ್ನಾಡೇ
ಪುರುಷವರನ ಧೀರನ
ನಿನ್ನ ಋಷಿ ಪರಂಪರೆಯ
ಕಳೆಯ ಮೆರೆಸಿದಮರನ"

(ಪು.ತಿನ. ನರಸಿಂಹಾಚಾರ್ಯ, ಸಮಗ್ರ ಕವನಗಳು, ಪುಟ. ೪೬೮.)

ಹೀಗೆ ಹೇಳಿರುವರು. ಇಂದು ಗಾಂಧೀಜಿಯವರ ತಪ – ತ್ಯಾಗಗಳು ಹುಸಿಯಾಗುತ್ತಿವೆ. ನಾಡಿನ ಬಗೆಗೆ ಅಪಾರ ಕಾಳಜಿಯುಳ್ಳ ಕವಿ ಗಾಂಧೀಯಿವರಲ್ಲಿ – 'ನೀನು ಹೊತ್ತಿಸಿರುವ ದೀಪ ಕರುಕಿಡದೊಲು ಹೊಮ್ಮಿಸು' – ಎಂದು ಪ್ರಾರ್ಥಿಸಿಕೊಂಡಿರುವರು. ಗಾಂಧೀಜಿಯರವ ಸ್ಮೃತಿಯೇ ಸಂಗತಿ, ಅವರ ವಿಸ್ಮೃತಿಯೇ ದುರ್ಗತಿಯೆಂದು ಬಿಂಬಿಸಿರುವರು.

**'ಗಾಂಧಿಸ್ತವ'** ಕವನದಲ್ಲಿಯೂ ಗಾಂಧೀಜಿಯವರ ವ್ಯಕ್ತಿ ಚಿತ್ರಣವನ್ನು ಕೊಟ್ಟಿರುವರು. ಅವರು ನಾಡ ವಿಧಾತ, ಸ್ವಾತಂತ್ರ್ಯದಾತ ಸತ್ತಂತಿದ್ದ ಈ ನಾಡಿನ ಜನತೆಯನ್ನು ನೀವು ಕುರಿಗಳಲ್ಲ ಅಮೃತ ಪುತ್ರರು, ಕೀಳರಿಮೆಯನ್ನು ಬಿಟ್ಟು ನನ್ನನ್ನು ಹಿಂಬಾಳಿಸಿರೆಂದು ಎಚ್ಚರಿಸಿದ್ದಾರೆ. ಎನಿತು ತಾರೆಗಳಿರಲಿ ಇರುಳೀ ಚಂದ್ರನೀಂ ಜ್ಯೋತಿಷ್ಮತಿ" – ರಾತ್ರಿ ಎಷ್ಟೇ ತಾರೆಗಳಿದ್ದರೂ ಚಂದ್ರನ ಬೆಳಕೇ ಬೆಳಕು ಎಂಬಂತೆ ದೇಶದಲ್ಲಿ ಎಷ್ಟೇ ಮಹಾವ್ಯಕ್ತಿಗಳಿದ್ದರೂ ಅವರು ಗಾಂಧೀಜಿಯವರಷ್ಟು ಆಗಲಾರರು. ಗಾಂಧೀಜಿ ತನ್ನ ತಂಬೆಳಕಿನಿಂದ ಈ ನೆಲವನ್ನು ಬೆಳಗಿದರು, ಕವಿಗೆ ಗಾಂಧೀಜಿ ಬರಿ ಕೇವಲ ರಾಜಕೀಯ ವ್ಯಕ್ತಿಯಲ್ಲ, ಆಧ್ಯಾತ್ಮ ಯೋಗಿ, ಸಂತ ಶ್ರೇಷ್ಠನೂ, ಅವತಾರ ಪುರುಷರೂ ಆಗಿದ್ದಾರೆ. ಇಂತಹ ಉನ್ನತ ಮಹಾವ್ಯಕ್ತಿಗೆ ಕವಿಯ ಆ ಚಿತ್ತ ಬಾಗಿದೆ. ಇವರ – **'ಹೃದಯ ವಿಹಾರಿ ಸಂಕಲನ'**ದಲ್ಲಿಯೂ ಇನ್ನೊಂದು **'ಗಾಂಧಿಸ್ತವ'** – ಎನ್ನುವ ಕವನವಿದೆ. ಇದರಲ್ಲಿಯೂ ಗಾಂಧೀಜಿಯವರ ವ್ಯಕ್ತಿತ್ವವನ್ನು ಬಣ್ಣಿಸಿರುವರು.

"ಲೋಭ ಮೋಹ ಭಯ ಭ್ರಾಂತ ದೀನ ಸುಷ್ಕಾತ್ಮ ಭಾರತಂ
ಅಂತಸುಪ್ತಂ ಬಹಿಷ್ತ ಪ್ತಂ ಸರ್ವಲೋಕ ಬಹಿಷ್ಕೃತಂ
ಆದುದಾಚಾರ್ಯನಿವನಿಂ ಪ್ರಾಣಿತಂ ಗೌರವಾನ್ವಿತಂ"

(ಡಾ. ಎ.ಎಸ್. ವೇಣುಗೋಪಾಲರಾವ್, ಪು.ತಿ. ನರಸಿಂಹಾಚಾರ್ಯರ
ಕಾವ್ಯ – ಒಂದು ಅಭ್ಯಾಸ, ಪುಟ. ೩೦೬.)

– ಲೋಭ, ಮೋಹ, ಭಯ–ಭ್ರಾಂತಿ, ದೀನತೆಗಳಿಂದ ಭಾರತದ ಆತ್ಮ ಶುಷ್ಕವಾಗಿತ್ತು. ಆಗ ಈ ಮಹಾತ್ಮನು ಹುಟ್ಟಿ ಬಂದು ಭಾರತಕ್ಕೆ ಜೀವಕಳೆಯನ್ನು ಪ್ರಧಾನ ಮಾಡಿದನು. ಗಾಂಧೀಜಿಯವರು ಬರಿ ರಾಜಕೀಯ ಹೋರಾಟವಲ್ಲ, ಬಾಹ್ಯ ಸ್ವಾತಂತ್ರ್ಯ ಹೋರಾಟವಲ್ಲ; ಆಂತರಿಕ ಆತ್ಮಶುದ್ಧಿಯ ಅಂತಸತ್ವವನ್ನು ಹೊಂದುವ ಹೋರಾಟವೂ ಆಗಿದೆ. ಅಂತೆಯೇ ಈ ಮಹಾತ್ಮನು 'ಆತ್ಮೋದ್ಧರಣ ಮೌಲ್ಯಗಳು ದಕ್ಕಿವೆ ಮಿಶೋದಿಸಲ್" ಎಂಬ ಎಚ್ಚರ ಕೊಟ್ಟಿರುವರು. ಕವಿ ಮತ್ತೆ ಈತನನ್ನು ಹೀಗೆ ನೆನೆದಿರುವನು.

"ನೆನೆವೆ ದಾಂತನಂ ಪರಮ ಶಾಂತನಂ
ನನ್ನಿ ನೋಂತನಂ ಧೀರನಂ
ಸ್ಮಯಕೃತಾಂತನಂ ಕೃತಿಮಹಾಂತನಂ
ಸುಜನಕಾಂತ ನೇತಾರನಂ"

(ಡಾ. ಎ.ಎಸ್. ವೇಣುಗೋಪಾಲರಾವ್,
ಪು.ತಿ. ನರಸಿಂಹಾಚಾರ್ಯರ ಕಾವ್ಯ – ಒಂದು ಅಭ್ಯಾಸ, ಪುಟ. ೩೦೬.)

ವಿ. ಸೀತಾರಾಮಯ್ಯ ಅವರು ಗಾಂಧೀಜಿಯವರನ್ನು ಕುರಿತು ಹಲವಾರು ಕವನಗಳನ್ನು ರಚಿಸಿರುವರು. **'ಮಹಾತ್ಮ'** – ಕವನದಲ್ಲಿ ಎಲ್ಲವನು ಬಲ್ಲವ, ಗೆಲುವವ, ಎಲ್ಲರಿಗೂ ಒಲಿದವನೆಂದೂ, ದಲಿತರನ್ನು ದೀನರನ್ನು ನಿರ್ಬಲರನ್ನು ಉದ್ಧರಿಸಿರುವದನ್ನು ಹೇಳಿರುವರು. 'ಗಾಂಧಿ' ಕನವದಲ್ಲಿ ಇವರ ಸಾಧನೆ – ವ್ಯಕ್ತಿತ್ವವನ್ನು ಬಣ್ಣಿಸಿರುವರು. ಗಾಂಧೀಜಿ ಭಾರತದಲ್ಲಿ ಹುಟ್ಟಿ, ಆಫ್ರಿಕಕ್ಕೆ ಹೋಗಿ ಅಲ್ಲಿ ನರರು – ನರರಿಗೆ ಮಾಡುವ ಅನ್ಯಾಯಕ್ಕೆ ಹೇಸಿ ದುರ್ಬಲರನ್ನು ಉದ್ಧರಿಸುವ ಮಾರ್ಗವೊಂದನ್ನು ಕಂಡುಕೊಂಡು ಆ ಮಾರ್ಗವನ್ನು ನಮ್ಮಲ್ಲಿಗೆ ತಂದರು. ಈ ಮಾರ್ಗವನು ಗಾಂಧೀಜಿಗಿಂತ ಮೊದಲೇ ಯಾರಾದರೂ ಇಲ್ಲಿ ಬಳಸಿದ್ದರೆ ಅದು ಸಫಲವಾಗುತ್ತಿರಲಿಲ್ಲವೆಂಬ ಶಂಕೆಯನ್ನು ವ್ಯಕ್ತಪಡಿಸಿರುವರು. ಇವರು ಕಂಡುಕೊಂಡ ಮಾರ್ಗವು

"ಇಲಿಯು ಹುಲಿಯಾಗುವಂತೆ
ಇದು ವ್ರತ ವ್ರತಕೊಟ್ಟು ಬಳಲಿದಿರಿ
ಆದವರ ಆಗದವರ ಜೊತೆಗೂಡಿ ದುಡಿಸಿ"

(ವೀ. ಸೀತಾರಾಮಯ್ಯ, ಸ್ನೇಹ ವಿಶ್ವಾಸ (ಸಮಗ್ರ ಕಾವ್ಯ ಸಂಪುಟ), ಪುಟ. ೨೨೨.)

ಸತ್ಯ – ಹಿಂಸೆ – ಅಹಿಂಸೆ, ಸತ್ಯಾಗ್ರಹ – ಮೊದಲಾದ ವ್ರತ, ಅಸ್ತ್ರಗಳಿಂದ ಇವುಗಳು ಆಗಿ ಬಾರದವರನ್ನು, ಆಗಿ ಬರುವವರನ್ನು ಜೊತೆಗೂಡಿಸಿಕೊಂಡು ದುಡಿದು ಭಾರತಕ್ಕೆ ಸ್ವಾತಂತ್ರ್ಯ ತಂದುಕೊಟ್ಟಿರುವಿರಿ. ಇದು ಈ ನಾಡಿಗೆ ನೀವು ಕೊಟ್ಟ ಬಹುದೊಡ್ಡ ಕೊಡುಗೆ.

ಇವರ – **'ಕೈಮುಗಿದ ಗಾಂಧಿ'** ಕವನವು ಗಾಂಧೀಜಿಯವರು ಮಡಿದ ದುಃಖದ ಸಂದರ್ಭದಲ್ಲಿ ರಚಿಸಿದ ಶೋಕ ಕವನ. ಗೋಡ್ಸೆಯು ಗಾಂಧೀಜಿಯವರಿಗೆ ಒಂದರ ಮೇಲೆ ಒಂದರಂತೆ ಗುಂಟು ಹಾಕಿದಾಗ ಗಾಂಧೀಜಿಯವರು ಸಾಯುವ ಮುನ್ನ ತಮ್ಮ ಹಂತಕ ಗೋಡ್ಸೆಗೆ ಕೈಮುಗಿದರು. ಮುಗಿದ ಕೈಮುಗಿದಂತೆ ಇರುವಾಗಲೇ ಕೊನೆಯುಸಿರೆಳೆದರೆಂದು ಆರಂಭದಲ್ಲಿ ಹೇಳಿರುವರು. ಮುಂದೆ ಗಾಂಧೀಜಿಯವರ ಕಾರ್ಯ ಸಾಧನೆಯ ವ್ಯಕ್ತಿ ಚಿತ್ರಣವನ್ನೇ ಕೊಡುತ್ತಾರೆ. ಶಿವನು ವಿಷವನ್ನು ಕುಡಿದಂತೆ ದೇಶದ (ಸಮಸ್ಯೆಗಳ) ವಿಷವನ್ನು ಉಂಡು ಕೇಡನ್ನು ಹೀರಿಕೊಂಡವರು; ಇಂಥವರನ್ನು ಕೊಂದದ್ದನ್ನು ಕಂಡು ಜಗತ್ತು ಹಿಗ್ಗಿತೇ? ಕೊಲೆಗಾರನಿಗಾದರೂ ಋಣವು ತೀರಿತೆ? ಇಲ್ಲ. ಅವರ ಹಿರಿಮೆಯ ಸಾಧನೆಯನ್ನು ಹೀಗೆ ವರ್ಣಿಸಿರುವರು :

"ಕಳೆ ಬೆಸುಗೆಗಳ ಬೆಸೆದೆ ನಾಡ ಕಟ್ಟಿದಿರಿ
ಬಾನಿನೆತ್ತರಕದನು ನಿಲಿಸಿ
ಹೊಂಗಳಸ ಮುಡಿಸಿ"

(ವಿ. ಸೀತಾರಾಮಯ್ಯ, ಸ್ನೇಹ – ವಿಶ್ವಾಸ (ಸಮಗ್ರ ಕಾವ್ಯ ಸಂಪುಟ), ಪುಟ. ೨೨೨)

ಕೆಟ್ಟದು – ಎಂಬ ಕಳೆಯ, 'ಒಳ್ಳೆಯದು' – ಎಂಬ ಬೆಳೆಗಳ ನಡುವೆ ಭಾವೈಕ್ಯತೆಯನ್ನು ಬೆಸೆದು ದೇಶವನ್ನು ಕಟ್ಟಿದ್ದೀರೆಂದು ಬಿಂಬಿಸಿದ್ದೀರಿ. ಇವರ ಸ್ವಾತಂತ್ರ್ಯ ಚಳುವಳಿಯ ಕೆಲವು ಘಟನೆಗಳನ್ನು ಸಮಾಜೋದ್ಧಾರಕ ಕಾರ್ಯಗಳನ್ನು ನೆನೆಸಿಕೊಂಡ ಕವಿ ಅಂದು ಗಾಂಧೀಜಿಯವರಿಗೆ ಹೀಗೆ ಪ್ರಾರ್ಥಿಸಿಕೊಂಡಿದ್ದಾರೆ :

"ಇನ್ನೊಮ್ಮೆ ಭಾರತವು ಪರಿಶುದ್ಧವಪ್ಪಂತೆ
ಮುಗಿದ ಕೈ ತೆರೆದೆಮ್ಮೆ ಹರಸುತಿರಲಿ ಹರಸುತ್ತಿರಲಿ"

(ವಿ. ಸೀತಾರಾಮಯ್ಯ, ಸ್ನೇಹ – ವಿಶ್ವಾಸ (ಸಮಗ್ರ ಕಾವ್ಯ ಸಂಪುಟ), ಪುಟ. ೨೨೫)

ಕೊನೆಯುಸಿರೆಳೆಯುವಾಗ ಗೋಡ್ಸೆಗೆ ಮುಗಿದ ಕೈ ಮುಗಿದಂತೆ ಇರುವಾಗಲೆ ಕೊನೆಯುಸಿರೆಳೆದರು. ಈ ಮುಗಿದ ಕೈಗಳನ್ನು ತೆರೆದು ನಮ್ಮನ್ನು ಹರಸಿ ಆಶೀರ್ವದಿಸಲು ಕವಿ ಕೇಳಿಕೊಂಡಿರುವನು.

ಎಸ್.ವಿ. ಪರಮೇಶ್ವರ ಭಟ್ಟರು (ಅಂಚೆಪೆಟ್ಟಿಗೆ ಸಂಕಲನದ) **'ಮಹಾತ್ಮ ಗಾಂಧಿಗೆ'** ಕವನದಲ್ಲಿ ಗಾಂಧೀಜಿಯವರ ವ್ಯಕ್ತಿತ್ವವನ್ನು ಹಲವಾರು ರೂಪಕ–ಪ್ರತಿಮೆ–ಸಂಕೇತಗಳ ಮೂಲಕ ವರ್ಣಿಸಿರುವರು. ಗಾಂಧೀಜಿಯವರ ನಡೆ – ನುಡಿಗಳು ಸೂರ್ಯನಂತೆ, ಅಗ್ನಿಯಂತೆ, ವಿದ್ಯುತ್‌ನಂತೆ, ಪ್ರವಾಹದಂತೆ, ಹೂವಿನಂತೆ, ಜೇನಿನಂತೆ, ಹಾಲಂತೆ, ಅಮೃತದಂತೆ, ಮಂಗಳವೂ ಮನೋಹರವೂ ಆಗಿದೆ. ಅಂತೆಯೇ ಅವರನ್ನು ಮಹಾತ್ಮನೆಂದು ಬಗೆಯಲಾಗಿದೆ. ಕವಿ ಗಾಂಧೀಜಿಯವರ ಪಾದಕಮಲಗಳಿಗೆ ವಂದಿಸಿರುವರು.

ಸತ್ಯ – ಅಹಿಂಸೆ – ಶಾಂತಿ – ನೀತಿಯಿಂದ ಭಾರತೀಯರಿಗೆ ಸ್ವಾತಂತ್ರ್ಯ ತಂದು ಕೊಟ್ಟಿರುವುದನ್ನು, ದುಷ್ಟ ಜನರ ಶಿಕ್ಷೆಗೆ, ಶಿಷ್ಟ ಜನರ ರಕ್ಷಣೆಗೆ ಶ್ರೀ ಕೃಷ್ಣ, ಬುದ್ಧ, ಕ್ರಿಸ್ತರಂತೆ ಅವತಾರ ತಾಳಿ ಬಂದಿರುವನೆಂದು ಬಣ್ಣಿಸಿರುವರು. ಇದೇ ಸಂಕಲನದ 'ನಿನ್ನ ಉಪದೇಶ' ಕವನದಲ್ಲಿ ಗಾಂಧೀಜಿಯವರು ವೇದಾಗಮ, ಭಗವದ್ಗೀತೆಗಳನ್ನು ಮಂಥನಮಾಡಿ ಕಂಡುಕೊಂಡ ತತ್ತ್ವ ಚಿಂತನೆಗಳನ್ನು ನಮಗೆ ಉಪದೇಶಿಸಿರುವರು. ಜಾತಿ – ಮತಗಳ ಸಂಕೋಲೆ ಹರಿದೊಗೆದು ಮನುಕುಲದ ಮಾನವರೆಲ್ಲಾ ಒಂದೇ ಎಂದು "ದ್ವೇಷವನ್ನು ಬಿಟ್ಟು ಪ್ರೀತಿ – ನೀತಿಯಿಂದ ಬಾಳಿರೆಂದು" ಉಪದೇಶಿಸಿರುವರು.

ಇವರ 'ಕೃಷ್ಣಮೇಘ' ಸಂಕಲನದ **'ಗಾಂಧೀಜಿಯವರನ್ನು ಕುರಿತು'** ಕವನದಲ್ಲಿ ಬಹಳ ಸುದೀರ್ಘವಾಗಿ ಗಾಂಧೀಜಿಯವರ ವ್ಯಕ್ತಿತ್ವ, ತತ್ತ್ವ – ಸಿದ್ಧಾಂತಗಳನ್ನು, ಕಾರ್ಯಗಳನ್ನು ಕುರಿತು ಹೇಳಿರುವರು. ಅದನ್ನು ಈಗ ನೋಡೋಣ.

ಗಾಂಧೀಜಿಯವರನ್ನು ಉದ್ದೇಶಿಸಿ ಹೀಗೆ ಹೇಳಿರುವರು 'ಭಾರತ ಪುತ್ರ, ಪ್ರೇಮ ಪವಿತ್ರ, ಲೋಕ ಸುಮಿತ್ರನೂ, ಶಾಂತಿನಿಯೋಗಿ, ತ್ಯಾಗಿಯೂ ಆಗಿರುವ ನೀನು ನಿನ್ನಂಥ ಶಾಂತಿದೂತನೂ ಜಗತ್ತಿನಲ್ಲಿ ಮತ್ತೆಲ್ಲಿಯೂ ಜನಿಸಲಾರನು. ಕಲಿಯುಗವನ್ನು ಕೃತಯುಗವನ್ನಾಗಿ ಮಾಡಿರುವೆ. ಸತ್ಯ – ಅಹಿಂಸೆ – ಶಾಂತಿಯನ್ನು ನಡೆ – ನುಡಿಯಲ್ಲಿಯೂ ಅಳವಡಿಸಿಕೊಂಡು ತೋರಿಸಿರುವೆ. ನಿಷ್ಕಮನ ಕರ್ಮಕೆ ನಿನ್ನ ಜೀವನವನ್ನೇ ವ್ಯಾಖ್ಯಾನ ಮಾಡಿರುವೆ. ಆ ತತ್ತ್ವ ಈ ತತ್ತ್ವವೆನ್ನದೆ ಎಲ್ಲದರ ಸಾರಹೀರಿ ವಿಶ್ವತತ್ತ್ವವನ್ನು ಕಂಡುಕೊಂಡೆ. ಸತ್ಯ, ಅಹಿಂಸೆ – ಎಂಬ ಇರ್ಬಾಯ ಖಡ್ಗವನು ಹಿಡಿದು ಹಗೆಯ ವಿರುದ್ಧ ಹೋರಾಡಿದ ಘಟನೆ ಇನ್ನೊಬ್ಬ ಗಾಂಧಿಯ ಚರಿತ್ರೆಯಲ್ಲಿ ಇದೆಯೇ? ಇಲ್ಲ. ಈ ನಾಡನ್ನು ಪರದಾಸ್ಯದಿಂದ ಬಿಡುಗಡೆಗೊಳಿಸಿ ಶಾಂತಿಯ ಮಳೆಗರೆದೆ. ನಿನ್ನ ಪ್ರಭಾವದಿಂದ.

"ಬೆಂಕಿ ನೀರಾಯಿತು ನಂಜು ಹಾಲಾಯಿತು
ಹಾವು ಹೂವಾಯಿತು ನೋಡ
ಸಹನೆಯ ಸಮತೆಯ ನಿನ್ನ ತತ್ವದ ಮಾತು
ಕಾಣಿಸಿತೆಂಥ ಪವಾಡ"

(ಎಸ್.ವಿ. ಪರಮೇಶ್ವರ ಭಟ್ಟ, ಕೃಷ್ಣ ಮೇಘ, ಪುಟ. ೨೦.)

ನೀನು ಮೊದಲು ನಿನ್ನನು ನೀನು ಶುಚಿಗೊಳಿಸಿಕೊಂಡು ಅನಂತರ ಹೊರಗಿನ ಲೋಕವನ್ನು ಸುಧಾರಿಸಲು ಅಣಿಯಾದೆ. ಆಗ ಲೋಕವೇ ಮಣಿಯಿತು ನಿನಗೆ. ರಾಜಕಾರಣದೊಳಗೆ ಆಧ್ಯಾತ್ಮವನು ತಂದು ಬೆರಸಿ ರಾಜಕಾರಣವನ್ನು ಪವಿತ್ರಗೊಳಿಸಿದೆ. ವರ್ಣ – ವರ್ಗ, ವೃತ್ತಿ – ಜಾತಿ ಎಲ್ಲವೂ ಒಂದೇ. ಈಶ್ವರ – ಅಲ್ಲಾ – ರಾಮ – ರಹೀಮರೆಲ್ಲಾ ಒಂದೇ. ದೇವರೊಂದೆ ನಾಮ ಹಲವು – ಎಂದು ಬಗೆದು ಅಹಿಂಸೆಯ ಮಾರ್ಗದಲ್ಲಿ ನಡೆದು ಸತ್ಯವನ್ನು ಹುಡುಕುವ ನಿನ್ನ ಪಂಥ, ಜಗತ್ತಿನ ಚರಿತ್ರೆಯಲ್ಲಿ ಮತ್ತೆಲ್ಲಿಯೂ ದೊರೆಯಲಾರದು. ಸತ್ಯವನ್ನರಸುವ ನಿತ್ಯ ಯಾತ್ರಿಕನಾದ ನಿನಗೆ ಸತ್ಯವು ಪಶ್ಚಿಮ – ಪೂರ್ವ, ದಕ್ಷಿಣ – ಉತ್ತರ ಎಲ್ಲಿದ್ದರೂ ಅಲ್ಲಿಗೆಯೇ ಹೋದೆ. ಜನರಿಗೆ, 'ನಿಮ್ಮ ಅವುಗುಣಗಳೆ ಹಗೆ ಹೊರಗಿನ ಜನರೆಲ್ಲ ಸ್ನೇಹದಿಂದಲೇ ಅಭ್ಯುದಯ'ವೆಂದು ಉಪದೇಶಿಸಿದೆ. ನಿಷ್ಕಾಮ ಕರ್ಮದಿಂದ ಹೊಸತನು ಸಾಧಿಸಿ, ಈ ಶತಮಾನದ ಅವಧೂತನಾದೆ. ಸತ್ಯಾಗ್ರಹದ ಅದ್ವಿತೀಯ ಸಾಹಸವನ್ನು ಮೆರೆದ ಸಮಷ್ಟಿಯ ರೂವಾರಿಯಾಗಿ ಸೃಷ್ಟಿಯ ಮಕುಟವಾದೆ. ಬರಿ ತ್ಯಾಗಕ್ಕಾಗಿ ತ್ಯಾಗ ಮಾಡಿದರೆ ಅದು ತ್ಯಾಗವಲ್ಲ. ಯಾರಿಗೆ ಯಾವುದು ಅಗತ್ಯವೊ ಅದನ್ನು ಅರಿತು, ತ್ಯಾಗ ಮಾಡಿದರೆ ಅದು ನಿಜವಾದ ತ್ಯಾಗ. ತ್ಯಾಗಿಯು ಇದನ್ನು ಅರಿತುಕೊಳ್ಳಬೇಕೆಂದು ತಿಳಿಸಿದೆ.

ಗಾಂಧೀಜಿಯವರು ಕಾಂಗ್ರೆಸ್ ನಾಯಕತ್ವವಹಿಸಿಕೊಂಡಿರುವುದನ್ನು ಮದವೇರಿದ ಕುದುರೆಯ ಸವಾರನಾಗಿರುವದಕ್ಕೆ ಹೋಲಿಸಿ ಅದನ್ನು ಪಳಗಿಸಿಕೊಳ್ಳುವ ಬಗೆಯನ್ನು ಹೀಗೆ ಬಣ್ಣಿಸಿರುವರು :

"ಕಣ್ಣು ಪಟ್ಟಿ ಕಡಿವಾಣಗಳಣಿ ಮಾಡಿದೆ
ಜೀನು ರಿಕಾಪನು ಬಿಗಿದೆ
ಕಾಂಗ್ರೆಸ್ಸು ಕುದುರೆಯ ಬಳಿಕ ನೀನೇರಿದೆ
ಭಾರಿ ಸವ್ವಾರನೆ ಆದೆ"

(ಎಸ್.ವಿ. ಪರಮೇಶ್ವರ ಭಟ್ಟ, ಕೃಷ್ಣ ಮೇಘ, ಪುಟ. ೨೫.)

ರಾಜಕೀಯ ಮದವೇರಿದ ಈ ಕಾಂಗ್ರೆಸ್ ಕುದುರೆಯ ಕಾಲಿಗೆ ಧರ್ಮದ ನಾಲನು ಕಟ್ಟಿ, ಪಥ್ಯದ ಸೊಪ್ಪನ್ನು ತಿನ್ನಿಸಿ, ಮದವಿಳಿಸಿದಿ – ಎಂದು ಅಂದು ಕಾಂಗ್ರೆಸ್ ಪಕ್ಷವನ್ನು ಸ್ವಾತಂತ್ರ್ಯ ಹೋರಾಟಕ್ಕೆ ಸುವ್ಯವಸ್ಥಿತವಾಗಿ ಸಂಘಟಿಸಿ ಅದನ್ನು ಸುಧಾರಿಸಿರುವುದನ್ನು ವರ್ಣಿಸಿರುವರು.

ಗಾಂಧೀಜಿ ಸನಾತನ ಧರ್ಮವನ್ನಳೆಯಲು ಮಾನದಂಡವಾದರು. ಶೀಲ – ಸದ್ಭಾವವನ್ನು ಅರಿಯಲು ಇವರಿಗೆ ಇವರೇ ಹೋಲಿಕೆ. ಯುದ್ಧದ ಭೀತಿಯಲ್ಲಿದ್ದ ಜಗತ್ತಿಗೆ, ನೊಂದ ಜನಕ್ಕೆ ಅವರ ಅಹಿಂಸೆಯ ತತ್ವವೇ ಸಂಜೀವನ ಔಷಧವಾಯಿತು.

ಅವರ ರಚನಾತ್ಮಕ ಕಾರ್ಯಗಳನ್ನು ಕುರಿತು ಅವರನ್ನು ಉದ್ದೇಶಿಸಿ ಹೀಗೆ ಹೇಳಿರುವರು. 'ದಲಿತಾಶ್ರಮ ಕಟ್ಟಿ ಆಶ್ರಮ ಧರ್ಮಕ್ಕೆ (ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ) ಹೊಸ ಅರ್ಥಕೊಟ್ಟೆ. ಮೂರ್ತಿ ಪೂಜೆಯಲ್ಲಿ ಪ್ರೀತಿ ತೋರಿದರೂ ಮೂಢಭಕ್ತಿಯನ್ನು ಖಂಡಿಸಿದೆ. ನಿನ್ನ ಮಹಿಮೆಯಿಂದ ಹೊಲೆಯರು – ಹರಿಜನರಾದರು. ದಲಿತರು – ಉದ್ಧೃತರಾದರು ; ಪತಿತರು – ಪಾವನರಾದರು, ದೀನರು – ಉನ್ನತರಾದರು' – ಎಂದಿರುವರು.

ಗಾಂಧೀಜಿಯವರ ಅವತಾರ ಕೇವಲ ಈ ದೇಶಕ್ಕೆ ಮಾತ್ರ ಸೀಮಿತವಲ್ಲ. ವಿಶ್ವಮಾನ್ಯವಾಗಿದೆ, ಅವರು ವಿಶ್ವಗುರುವಾಗಿರುವರು. 'ಗಾಂಧಿ' ಎಂಬುದರರ್ಥವೇ ಔದಾರ್ಯ – ಸ್ನೇಹ – ಸದ್ಭಾವನೆ – ಎಂಬುವಂತಾಯಿತು. ಗಾಂಧೀಜಿ ತತ್ತ್ವ – ಸಿದ್ಧಾಂತಗಳಿಗೆ ಅಕ್ಷಾಂಶ – ರೇಖಾಂಶಗಳ ಮಿತಿ ಇಲ್ಲ. ಭೂಪಟದಲ್ಲಿ ಇವುಗಳ ತವರು ಇದ್ದಷ್ಟೇ ಎಂದು ನಕಾಶೆ ತೋರಿಸುವಂತಿಲ್ಲ; ವಿಶ್ವವ್ಯಾಪಿ ಎಂದು ಬಣ್ಣಿಸಿರುವರು. ಅಂದು ಭಾರತೀಯರಲ್ಲಿ ಹರಡಿದ್ದ ಅಜ್ಞಾನವನ್ನು ಹೋಗಲಾಡಿಸಿ ಪರದಾಸ್ಯದಿಂದ ಮುಕ್ತ ಮಾಡಿದ್ದನ್ನು ಹೀಗೆ ವರ್ಣಿಸಿರುವರು.

"ಭಾರತೀಯರ ಮನದಾಕಾಶದಗಲಕೆ
ಹಬ್ಬಿದ್ದ ಹೇ ಕೃಷ್ಣ ಮೇಘ

ಅಂದಿನ ನಿನ್ನ ಬೋಧಾಮೃತ ವರ್ಷಕೆ
ಕರಗಿತು ದಾಸ್ಯ ನಿದಾಘ"

(ಎಸ್.ವಿ. ಪರಮೇಶ್ವರ ಭಟ್ಟ, ಕೃಷ್ಣ ಮೇಘ, ಪುಟ. ೨೯.)

ಅಂದು ನೀನು ಸಿಡಿಲಾಗಿ ಪಾಪವ ಸುಟ್ಟೆ, ಗುಡುಗಿ ಎಚ್ಚರಿಸಿದಿರಿ, ಮಳೆಯಾಗಿ ತಾಪವನ್ನು ಕಳೆದೆ. (ಚರಗ ಸಂಕಲನದ) **'ಆಯ್ತು ಜಗವೆ ಪವಿತ್ರವು!'** ಕವನದಲ್ಲಿ ಗಾಂಧೀಜಿಯವರು ದೇವಲೋಕದಿಂದ ಮನುಜರೂಪ ಧರಿಸಿ ಅವತರಿಸಿರುವರು. ಈ ಲೋಕಕ್ಕೂ ದೇವಲೋಕದ ಮಾನ್ಯತೆ ತಂದರೆಂದು ವಿವರಿಸಿರುವರು. ಗಾಂಧೀಜಿಯವರು ಹುಟ್ಟಿನಿಂದಾಗಿ ಈ ನಾಡಿನಲ್ಲಿ –

"ಹಿಂಸೆಗೆ ಅಜ್ಞಾತವಾಸ
ದ್ವೇಷಕೆ ವನವಾಸವು
ಬಂದಿತೊಮ್ಮೆ ಗಾಂಧಿ ಹುಟ್ಟೆ
ಹುಸಿಗೆ ಬಂದಿವಾಸವು!"

(ಸಿದ್ಧಯ್ಯ ಪುರಾಣಿಕ (ಕಾವ್ಯಾನಂದ), ಚರಗ, ಪುಟ. ೧.)

ಈ ನಾಡಿನ ಜನತೆ ಕುಂಭಕರ್ಣನ ನಿದ್ದೆಯಂತೆ ಜಡತೆಯಲ್ಲಿತ್ತು; ಗಾಂಧೀಯುಸಿರಿನಿಂದ ಅದು ತೊಲಗಿತು. ಇವರಿಂದ ಸ್ವಾತಂತ್ರ್ಯ ಚಳುವಳಿಗೆ ಬಲ ಬಂದು ದೇಶವು ಸ್ವತಂತ್ರಗೊಂಡು ಪ್ರಜಾಪ್ರಭುತ್ವವಾಗಿರುವದನ್ನು "ಒಲವಿಗಾಯ್ತು ವಿಜಯವು! ಸಾಮಾನ್ಯತೆಗಾಯ್ತು ಪಟ್ಟ" ಎಂದಿರುವರು. ಸೋತ ಶತ್ರುವೇ ರಾಜ್ಯವನ್ನು ಬಿಟ್ಟು ಕೊಟ್ಟ ವ್ಯಥೆಯನ್ನು ಮರೆತು ಗಾಂಧಿಯನ್ನು ಸ್ತುತಿಸಿರುವರು. ಗಾಂಧೀಜಿಯವರ ನುಡಿಯೊಳಗೆ ನೂರು ತೀರ್ಥ, ಅವರ ನಡೆಯೆ ದಿವ್ಯಕ್ಷೇತ್ರ ಇಂಥವರು ನಡೆದ ಈ ನೆಲ, ಈ ಜಗತ್ತು ಪವಿತ್ರವಾಯಿತು.

ಕೆ.ಎಸ್. ನರಸಿಂಹಸ್ವಾಮಿ ಅವರು (ಮಲ್ಲಿಗೆಯ ಮಾಲೆಯಲ್ಲಿ) **'ಗಾಂಧೀಜಿಯ ಪಾದಕೆ'** – ಕವನದಲ್ಲಿ ಗಾಂಧೀಜಿಯವರು ಆಫ್ರಿಕಾದಲ್ಲಿ ಶೋಷಣೆಯ ವಿರುದ್ಧ ಹೋರಾಡಿದುದನ್ನು, ಭಾರತದಲ್ಲಿ ಬ್ರಿಟಿಷರ ದಬ್ಬಾಳಿಕೆ, ಅಧಿಕಾರದ ದರ್ಪ, ಸಾಮ್ರಾಜ್ಯ ವ್ಯಾಮೋಹದ ಮದವನು ಇಳಿಸಿದುದನ್ನು, ಉಪವಾಸ ಮಾಡಿರುವುದನ್ನು ದೀನರಿಗೆ, ನೊಂದವರಿಗೆ ತಂದೆ – ತಾಯಿಯಾಗಿದ್ದನೆಂದು ಬಣ್ಣಿಸಿರುವರು. ಗಾಂಧೀಜಿಯವರನ್ನು –

ಕೊಲ್ಲ ಬಂದವನಿಗೆ ಕ್ರಿಸ್ತನೊಲು ಕೈಮುಗಿದೆ;
– ಸಾಕ್ರೆಟೀಸ್ ! ಮತ್ತೊಮ್ಮೆ ವಿಷವ ಕುಡಿದೆ"

(ಕೆ.ಎಸ್. ನರಸಿಂಹಸ್ವಾಮಿ, ಮಲ್ಲಿಗೆಯ ಮಾಲೆ, ಪುಟ. ೧೯೬.)

ಕ್ಷಮಾಗುಣದಲ್ಲಿ ಯೇಸುಕ್ರಿಸ್ತನಿಗೆ ಹೋಲಿಸಿದರೆ, ಇಲ್ಲಿಯ ಶೋಷಣೆ – ದುಷ್ಕೃತ್ಯಗಳೆಂಬ ವಿಷವನ್ನು ಕುಡಿಯಲು ಸಾಕ್ರೆಟಸ್‌ನೇ ಮತ್ತೊಮ್ಮೆ ಗಾಂಧೀಜಿಯಾಗಿ ಹುಟ್ಟಿ ಬಂದಿರುವನೆಂದು ಕಲ್ಪಿಸಿರುವರು. ಈ ನಾಡನ್ನು ಅಹಿಂಸೆಯಿಂದ ಹರಸಿ, ಚರಕದಲಿ ಸರಳತೆಯ ಇಂಪನ್ನು ಕೊಟ್ಟೆ ಭಾರತದ ಬಿಡುಗಡೆಗಾಗಿ ಹಗಲಿರುಳು ಶ್ರಮಿಸಿ ಎಲ್ಲರಿಗೂ ಬೆಳಕಾಗಿ ತಾರೆಯಾದೆ – ಎಂದು ಬಣ್ಣಿಸಿರುವರು.

ಸ್ವಾತಂತ್ರ್ಯೋದಯದ ಸಂದರ್ಭದಲ್ಲಿ ನವಖಲಿಯಲ್ಲಿ ಮತೀಯ ಗಲಭೆಯಲ್ಲಿ ಸಂತ್ರಸ್ಥರನ್ನು ಸಂತೈಸಲು, ಶಾಂತಿ ನೆಲೆಸಲು ಶ್ರಮಿಸಿರುವುದನ್ನು ಪ್ರಸ್ತಾಪಿಸಿರುವರು. ಲೋಕದ ಗುರು, 'ಪರಂಜ್ಯೋತಿ', ಮಾನವತೆಯ ಉಸಿರೆಂದು ಇವರ ವ್ಯಕ್ತಿತ್ವವನ್ನು ಬಣ್ಣಿಸಿರುವರು.

ಚೆನ್ನವೀರ ಕಣವಿ ಅವರು – **'ಗಾಂಧೀಯುಗ'** – ಕವನದಲ್ಲಿ, ಎಲ್ಲೆಲ್ಲೂ ಗಾಂಧೀಜಿಯ ಹೆಸರೇ ಕೇಳಿಬರುತ್ತದೆ. ಅವರ ಪ್ರಭಾವವೇ ಹಾಗಿತ್ತು. ಒಂದು ಯುಗವನ್ನೇ ನಿರ್ಮಾಣ ಮಾಡಿದರು. ಅವರ ವಿಶ್ವಮಾನ್ಯ ವ್ಯಕ್ತಿತ್ವವನ್ನು ಹೀಗೆ ವರ್ಣಿಸಿರುವರು :

"ವಿಶ್ವಬಂಧು ವಿಶ್ವಾತ್ಮನೆಂದು ಜನಕೋಟಿ ನಮಿಸುತಿಹುದು
ಲೋಕದೀಚೆ ಮುಗಿಲಂಚಿನಾಚೆ ಅವಧಾತ್ಮ ತುಳುಕುತಿಹುದು
ನೇಸರುದಿಸಿ ಹೂಗಾಳಿ ಸೂಸಿ ಸಂದೇಶ ಬೀರುತಿಹವು"

(ಚನ್ನವೀರ ಕಣವಿ : ಕಣವಿ ಸಮಗ್ರ ಕಾವ್ಯ, ಪುಟ. ೧೧೨.)

ಗಾಂಧೀಜಿಯವರ ಸಮಾಜೋದ್ಧಾರಕದ ಕಾರ್ಯವನ್ನು ಹೀಗೆ ಶ್ಲಾಘಿಸಿರುವರು.

"ದೀನ ದಲಿತರುದ್ಧರಣ – ಹರಣ ಮುಡಿಪಿಟ್ಟ ದೇಹ ಕರಗಿ
ಯೋಗಿ ತ್ಯಾಗಿ ಮನಬುದ್ಧಿಮಾಗಿ ಪದಯುಗ್ಮಕೆರಗಿ ಬಾಗಿ"

(ಚನ್ನವೀರ ಕಣವಿ : ಕಣವಿ ಸಮಗ್ರ ಕಾವ್ಯ, ಪುಟ. ೧೧೨.)

ಇಂದು ಗಾಂಧೀಜಿಯವರು ಇಲ್ಲವೆಂದು ಅವರ ತತ್ತ್ವ ಆದರ್ಶಗಳೂ ಇಲ್ಲವೆಂದು ತಿಳಿಯುವುದು ತಪ್ಪು. ಇಂದು ಅವರು ಇಲ್ಲದಿದ್ದರೂ ಅವರು ಕೊಟ್ಟು ಹೋದ ತತ್ತ್ವ ಉಪದೇಶಗಳನ್ನು ಜಗತ್ತಿನ ಎಲ್ಲ ಜೀವಿಗಳೂ ಬಲ್ಲರು ಅವರ ತತ್ತ್ವ ಆದರ್ಶಗಳೇ ಇಂದು ನಮ್ಮನ್ನು ಶ್ರೇಷ್ಠರಾಗಿ ಬಾಳಿರೆಂದು ಹರಸುತ್ತಿವೆ – ಎಂದು ಗಾಂಧೀಜಿಯವರನ್ನು ಬಣ್ಣಿಸಿರುವರು.

ಅಧ್ಯಾಯ – ೫

## ಸ್ವಾತಂತ್ರ್ಯೋತ್ತರ ಕವನಗಳಲ್ಲಿ ಗಾಂಧೀಜಿ ಚಿತ್ರಣ

ಗಾಂಧೀಜಿಯನ್ನು 'ರಾಷ್ಟ್ರಪಿತ' ಎಂದು ಕರೆಯುತ್ತೇವೆ. ಭಾರತದ ಸ್ವಾತಂತ್ರ್ಯಕ್ಕೆ ಕಾರಣವಾದ ಅಹಿಂಸಾತ್ಮಕ ಮಹಾಹೋರಾಟದ ಚೈತನ್ಯಶಕ್ತಿಯಾಗಿದ್ದುದು ಮಾತ್ರವೇ ಇದಕ್ಕೆ ಕಾರಣವಲ್ಲ. ಅದರ ಜೊತೆ ಜೊತೆಯಲ್ಲಿಯೇ ಇಡೀ ರಾಷ್ಟ್ರದ ಸಮಗ್ರ ಜೀವನದಲ್ಲಿ ಒಂದು ಹೊಸ ಚೈತನ್ಯವನ್ನು ತಂದು ಅದರ ಮರುಹುಟ್ಟಿಗೆ ಅವರು ಕಾರಣರಾದರು. ರಾಷ್ಟ್ರದ ನಿಜವಾದ ಸ್ವಾತಂತ್ರ್ಯಕ್ಕೆ ರಾಜಕೀಯ ಸ್ವಾತಂತ್ರ್ಯ ಅನಿವಾರ್ಯವಾದ ಒಂದು ಕನಿಷ್ಠ ಅಂಶ ಎಂಬುದನ್ನು ಗಾಂಧೀಜಿ ಮನಗಂಡಿದ್ದಲ್ಲದೆ, ಅದನ್ನು ಎಲ್ಲರಿಗೂ ಮನಗಾಣಿಸಲು ತಮ್ಮ ನಡೆನುಡಿಗಳಿಂದ ನಿರಂತರವಾಗಿ ಶ್ರಮಿಸಿದರು. ಈ ರಾಷ್ಟ್ರದ ಅತ್ಯಂತ ಕೆಳಗಿನ ಸ್ತರದ ದೀನರೂ, ದಲಿತರೂ, ದುಃಖಿಗಳೂ ತಲೆಯೆತ್ತಿ ಸಮಾನ ಅವಕಾಶಗಳ ಆತ್ಮವಿಶ್ವಾಸದಿಂದ ಮುನ್ನಡೆಯುವಂಥ ದುಡಿಮೆಗೆ ಈ ಸ್ವಾತಂತ್ರ್ಯ ಬುನಾದಿಯಾಗಬೇಕೆಂಬ ಆಶಯ ಗಾಂಧೀಜಿಯವರದಾಗಿತ್ತು. ಆ ಕನಸನ್ನು ನನಸು ಮಾಡುವ ರಚನಾತ್ಮಕ ಯೋಜನೆಗಳನ್ನು ಸ್ವಾತಂತ್ರ್ಯದ ಹೋರಾಟದಷ್ಟೇ ಪ್ರಮುಖವಾಗಿ ರೂಪಿಸಿಕೊಂಡು ಬಂದರು. ರಾಜಕೀಯ ಸ್ವಾತಂತ್ರ್ಯದ ಜೊತೆಯಲ್ಲಿಯೇ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ರಂಗಗಳಲ್ಲಿ ಸಾಧಿಸಬೇಕಾದ ಸ್ವಾತಂತ್ರ್ಯದ ಸ್ವರೂಪನ್ನು ಅವರು ಅತ್ಯಂತ ಕಳಕಳಿಯಿಂದ ಪ್ರತಿಪಾದಿಸಿದರು. ಆದರೆ ಸ್ವಾತಂತ್ರ್ಯದ ಅನಂತರ ಅದೆಲ್ಲಕ್ಕೂ ನಾವು ತಿಲಾಂಜಲಿಯನ್ನು ಕೊಟ್ಟೆವು. ನಮ್ಮ ಯಾವ ಸಮಸ್ಯೆಗಳನ್ನೂ ಗಾಂಧೀಜಿಯ ಆದರ್ಶ, ಆಶಯ, ಅಭೀಷ್ಟಗಳ ಹಿನ್ನೆಲೆಯಲ್ಲಿ ಪರಿಹರಿಸಿಕೊಳ್ಳಲು ಪ್ರಾಮಾಣಿಕವಾಗಿ ಪ್ರಯತ್ನಿಸಲಿಲ್ಲ. ಅವರ ಹೆಸರನ್ನು ಕೇವಲ ಅಲಂಕಾರಕ್ಕೆ ಅಗತ್ಯವಾದ ಪ್ರದರ್ಶನ ಸಾಮಗ್ರಿಯನ್ನಾಗಿಟ್ಟುಕೊಂಡೆವು. ಅದಕ್ಕೆ ವಿರುದ್ಧವಾದ ದಿಕ್ಕಿನಲ್ಲಿ ಹೊರಟು ಸಮಸ್ಯೆಗಳನ್ನು ಉಲ್ಬಣಗೊಳಿಸಿಕೊಂಡೆವು. ಸ್ವಾತಂತ್ರ್ಯೋತ್ತರ ಕವನಗಳಲ್ಲಿ ಗಾಂಧೀಜಿಯ ಚಿತ್ರಣ ವಿಶೇಷವಾಗಿ ಸ್ಮರಣೀಯವೆನಿಸಿದ್ದರೂ ಗಾಂಧೀಜಿಯ ಚಿಂತನೆಗಳು. ಅಷ್ಟೆ ಚರ್ಚೆಗೆ ಗ್ರಾಸವಾಗಿವೆ. ಸ್ವಾತಂತ್ರ್ಯೋತ್ತರದ ಆರಂಭದ ಕವನಗಳಲ್ಲಿ ಗಾಂಧೀಜಿಯವರ ಮೌಲ್ಯಗಳು, ಆದರ್ಶಗಳು, ಆರಾಧನಾಭಾವದ ಹಿನ್ನೆಲೆಯಲ್ಲಿ ಚಿತ್ರಿತವಾಗಿವೆ.

ಕವಿ ಕುವೆಂಪು ಅವರು ತಮ್ಮ ಕಾವ್ಯ ಪ್ರತಿಭೆಯ ಮೂಲಕ ಗಾಂಧಿಯ ಮರಣವನ್ನು ಅಮೃತ ಘಟನೆಯೆಂದು ಕರೆದರೂ, ಅವರ ಮರಣಾನಂತರದ ಭರತಖಂಡದ ದುರ್ದಶೆಯನ್ನು ಕಂಡಾಗ ಕವಿ ಸಿಡಿಲಾಗುತ್ತಾರೆ; ವರ್ಷವೊಂದರ ಹಿಂದೆ ಅವತರಿಸಿದ ಸ್ವಾತಂತ್ರ್ಯ ಲಕ್ಷ್ಮಿಯನ್ನು

ಸರ್ವಮಂಗಳೆ ಭದ್ರೆ ಕಲ್ಯಾಣಿ ಶಿವೆ ಲಕ್ಷ್ಮಿ ಎಂದು ಸ್ತುತಿಸಿದರೂ ಅವಳು ಕಾಳಿ ಮತ್ತು ದುರ್ಗೆ ಎಂಬುದನ್ನವರು ಮರೆಯುವುದಿಲ್ಲ. 'ಹೆತ್ತಯ್ಯನನ್ನೆ ಹುಟ್ಟಿದೊಡನೆಯ ತಿಂದೆ, ಹೇ ಭಯಂಕರಿ!' ಎಂದು ಮೂದಲಿಸುತ್ತಾರೆ. ಗಾಂಧಿ ಸಾವಿನ ಗಾಯ ಮಾಯುವುದಿಲ್ಲ. **'ಕುಳದ ಕಲಿಗೆ'** ಕವಿತೆ ರಚಿಸುವಾಗಲೂ ಗಾಂಧಿಯ ನೆನಪು ಮರುಕುಳಿಸುತ್ತದೆ; 'ಹೊಲದ ಗಾಂಧಿ, ನೆಲದ ನಾಂದಿ, ನೀನೇ ರಾಷ್ಟ್ರಶಕ್ತಿ' ಎಂದು ನೇಗಿಲಯೋಗಿಗೆ ತಮ್ಮ ಗೌರವವನ್ನು ಸಲ್ಲಿಸುತ್ತಾರೆ. ರಾಷ್ಟ್ರ ವಿಭಜನೆಗೆ ಕಾರಣವಾಗಿ, ಗಾಂಧೀಜಿಯನ್ನೇ ಹಿಂಬಾಲಿಸಿದ ರಾಜಕೀಯ ರಾವಣನನ್ನು ಕುರಿತು

'ಅಲ್ಲಾದೊಡಂ ಮರೆವೊಗು ಮಹಾತ್ಮನಂ,
ಸರ್ವವಂ ಕ್ಷಮಿಸಿ ರಕ್ಷಿಸಬಲ್ಲ ದಿವ್ಯಾತ್ಮನಂ ;
ವೈರಿ ದಶಶಿರನಾತ್ಮಮಂ ಕೊನೆಗೆ ತನ್ನೊಳಗೆ
ಕರೆಕೊಂಡವನ ನಾಮವನುಚ್ಚರಿಸುತುರುಳಿ
ಒಡಲಿನುಳಿದಾ ಸತ್ಯ ಅಹಿಂಸಾಣ ದಯಾತ್ಮನಂ' (ಇಕ್ಷು ಗಂಗೋತ್ರಿ–ಪುಟ–೩೫)

ಎಂದು ಹೇಳುವ ಮಾತಿನಲ್ಲಿ ಕೊರಗಿದೆ; ಅನುಕಂಪ ಇದೆ; ಧರ್ಮಕ್ರೋಧವಿದೆ ಮೇಲಾಗಿ ಮಹಾತ್ಮರ ಬಗೆಗೆ ಪೂಜ್ಯಭಾವನೆಯಿದೆ. ಭಾರತದಲ್ಲಿ ಏನೊಂದು ಘಟನೆ ನಡೆದರೂ ಕವಿಚೇತನದಲ್ಲಿ ಅವರ ನೆನಪು ಮರುಕಳಿಸುತ್ತದೆ.

ಸ್ವಾತಂತ್ರ್ಯೋತ್ತರ ಕವನಗಳಲ್ಲಿ ಬಹುಪಾಲು ಕವನಗಳು ಗಾಂಧೀಜಿಯವರನ್ನು ಆರಾಧನಾ ಭಾವ ಮತ್ತು ಆದರ್ಶದ ಪ್ರತೀಕಗಳೆಂಬಂತೆ ಚಿತ್ರಿಸಿವೆ. ಕವಿ ಮಾಸ್ತಿಯವರು **'ಗಾಂಧಿಯವರ ದರ್ಶನ'** ಎನ್ನುವ ಕವನದಲ್ಲಿ ಗಾಂಧೀಜಿಯವರ ವ್ಯಕ್ತಿತ್ವವನ್ನು ಎಳೆ ಎಳೆಯಾಗಿ ಬಿಡಿಸಿಟ್ಟಿದ್ದಾರೆ. ಲೋಕ ಬಾಂಧವನ ದರುಶನಕೆ ಬಂದಿರುವೆವು ಎಂದು ಹೇಳುವ ಕವಿ ಗಾಂಧಿಯವರದು. ಎಳೆಯ ಮಗುವಿನ ನಗೆಯ ವ್ಯಕ್ತಿತ್ವ ಹೊಂದಿದವರೆಂದು ವರ್ಣಿಸಿದ್ದಾರೆ. ಮುಂದುವರಿದು

ಹರಿಯ ಹಿರಿಯಾಳಿವನು
ಗಾಂಧೀ ಮಹಾತ್ಮ
ಕರುಣಿಪನು ಹರಿ ತನ್ನ
ಬಾಂಧವಗೆ ಶುಭವ (ಗಾಂಧಿ ಎಂಬುವ ಹೆಸರು, ಪುಟ. ೮)

ಎಂದು ಹೇಳುವುದಲ್ಲದೆ, ಮುಂದುವರಿದು

ಇವನ ಧರಿಸಿದ ಭೂಮಿ
ಪುಣ್ಯಭೂಮಿ ಇದು
ಇವನ ನೋಡಿದ ನಾವು
ಧನ್ಯರಾವೆಂದು (ಗಾಂಧಿ ಎಂಬುವ ಹೆಸರು, ಪುಟ. ೮)

ಎಂದು ಗಾಂಧೀಜಿಯವರ ದರ್ಶನವನ್ನು ಚಿತ್ರಿಸಿದ್ದಾರೆ.

ಎಸ್.ವಿ. ಪರಮೇಶ್ವರ ಭಟ್ಟರಂತೂ ಗಾಂಧೀಜಿಯವರ ಸಾವಿನಿಂದ ನೊಂದು. ಹೀಗೆ ನುಡಿಯುತ್ತಾರೆ **'ಅಮರನಾದೈ, ತಂದೆ!'** ಕವನದಲ್ಲಿ,

ಭರತವರ್ಷದ ದಿವ್ಯಧರ್ಮ ಪ್ರದೀಪನಂ
ಸ್ವಾತಂತ್ರ್ಯ ಸಾಮ್ರಾಜ್ಯ ಸೂರ್ಯ ಸ್ವರೂಪನಂ
ಆತ್ಮಾಭಿರಾಮನಂ ಆನಂದಧಾಮನಂ
ದಯ್ಯೆ ಕಾಲೋಕನಂ ಲೋಕ ಕಾರುಣ್ಯನಂ
ಶಾಂತನಂ ದಾಂತನಂ ಪರಮಸಂಪೂಜ್ಯನಂ (ಅಮರನಾದೈ, ತಂದೆ, ಪುಟ. ೧೮)

ಎಂದು ಪೂಜ್ಯಭಾವನೆಯಿಂದಲೇ ಗಾಂಧೀಜಿಯವರ ವ್ಯಕ್ತಿತ್ವವನ್ನು ಕಟ್ಟಿಕೊಡುತ್ತಾರೆ. ಗಾಂಧೀಜಿ ಭೌತಿಕವಾಗಿ ನಮ್ಮಿಂದ ದೂರವಾಗಿದ್ದರೂ, ಭಾರತೀಯರ ಆಂತರ್ಯದಲ್ಲಿ ಅವರ ನಡೆನುಡಿಗಳಿಂದ ಅಮರರಾಗಿರುತ್ತಾರೆಂಬ ಸಂದೇಶವನ್ನು ಈ ಕವನ ನೀಡುತ್ತದೆ.

ಗಾಂಧೀಜಿ ಸಾವಿನಿಂದ ಜರ್ಜರಿತರಾದರೂ, ಅವರ ಆದರ್ಶಗಳು ಭಾರತೀಯರಿಗೆಲ್ಲ ಬಹುಕಾಲ ಉಳಿಯಲಿ ಎಂಬ ಸದಾಶಯವನ್ನು ಹೊತ್ತ ವಿ. ಸೀತಾರಾಮಯ್ಯ ಅವರ ಕವನ **'ಕೈಮುಗಿವ ಗಾಂಧಿ'**ಯಲ್ಲಿ ಭಾರತಕೆ ನಿಮ್ಮ ಋಣ ಎಂದಿಗೂ ತೀರದೂ? ಭಾರತವೆಂಬ ಬೆಳೆಗೆ ಬದುಕು ನೀವು, ಬೆಳಕು ಬಾಳು ನೀವು, ಎನ್ನುವ ಕವಿ ಭಾರತದ ಉದ್ದಗಲಕ್ಕೂ ಹರಡಿರುವ ಭಾರತಾಂಬೆಯ ಮಡಿಲಲ್ಲಿ ನೀವೂ ಶಾಶ್ವತವಾಗಿರುವಿರಿ ಎಂಬಂತೆ ಅವರನ್ನು ಚಿತ್ರಿಸಿದ್ದಾರೆ.

ನದಿಯಲಿ ಕೂಡಲಲಿ ಕೊಳದಲ್ಲಿ ಸರದಲ್ಲಿ
ಕಡಲಲ್ಲಿ ತೀರ್ಥದಲ್ಲಿ ನಾಡು ಹೆರನಾಡಿನಲ್ಲಿ
ಎಲ್ಲೆಲ್ಲು ಎರಚಿಹೆವು ನಿಮ್ಮ ಸತ್ಯಾಂಶವನ್ನು
ಗಾಳಿಸುಳಿವಲ್ಲೆಲ್ಲ ನಿಮ್ಮುಸಿರೆ ನಮ್ಮುಸಿರು ಜೀವನವು ನಮಗೆ
ಹಸುರ್ ಚಿಗುರು, ಹೂ, ಕಾಯಿ, ಹಣ್ಣು
ಕಾಳು ತೆನೆ ಹೆಡ್ಡೆ ಗೆಳಸು, ಕಾಳ್ ಕಬ್ಬು ಜೇನು ಮೆಳಸು
ಎಲ್ಲೆಲ್ಲು ಎಲ್ಲವೂ ತಿರುಳಿಬ್ಬು ಹೊರವಾಗುತಿರಲೆಂದು
ಕವಿತೆಗಳ ಕೆಚ್ಚಲನು ತುಂಬಿ, ಕಾವಲಿನ ಗರುಕೆ ಹೊನ್ನಾಗಿ
ಹಸು ಮಕ್ಕಳೂಡುತಿಹ ತಾಯ ಹಾಲಾಗಿ
ಹೊಲಗದ್ದೆ ತೋಟಗಳ ತೆನೆಗೊನೆಗಳಾಗಿ
ಗೆಯ್ಮೆಗಳ ನಡಸಲಿಹ ಕೈಚಳಕವಾಗಿ (ಅಮರನಾದೈ, ತಂದೆ, ಪುಟ. ೨೦)

ಆವರಿಸಲಿ ಎಂಬಂತೆ ಅವರನ್ನು ಚಿತ್ರಿಸಿದ್ದಾರೆ. ಜೊತೆಗೆ ಭಾರತ ಇನ್ನೊಮ್ಮೆ ಪರಿಶುದ್ಧವಪ್ಪಂತೆ ಮುಗಿದ ಕೈಯಿಂದ ತೆರೆದ ಹೃದಯದಿಂದ ನಮ್ಮನ್ನು ಹರಸುತಿರಲಿ ಎಂಬ ಹಾರೈಕೆಯನ್ನು ವ್ಯಕ್ತಪಡಿಸಿದ್ದಾರೆ.

ಸ್ವಾತಂತ್ರ್ಯೋತ್ತರದ ಅಲ್ಪಾವಧಿಯಲ್ಲಿಯೇ ಗಾಂಧೀಜಿ ಹುತಾತ್ಮರಾದರು! ಅದ್ಭುತ ರಮ್ಯವೆನ್ನಬಹುದಾದ ಉನ್ನತ ನೆಲೆಗೆ ಅವರಾಗ ಏರಿದ್ದರು. ಅದನ್ನು ಗುರುತಿಸಿದ ಕವಿ ಅಕಬರ ಅಲಿ ಹೀಗೆ ಚಿತ್ರಿಸುತ್ತಾರೆ.

ಭಾರತದ ಮಾನಸದಿ ಮಿಂದು ಮೆರೆಯಲು ಬಂದ ಹಂಸ ತಾನು ।
ನಡೆ – ನುಡಿಯ ಬೆಳ್ಳಿಯನು ಬೆಳಬೆಳಗಿಸಿ
ಮನದ ಬಂಗಾರವನು ತೊಳತೊಳಗಿಸಿ
ಗಾಳಿ – ತೇರನ್ನೇರಿ, ಬೆಳಕು – ಲೋಕವ ಸಾರಿ,
ನನ್ನಿ – ನೇಹದ ರೆಕ್ಕೆ ಜಗದಗಲ ಹರಹುತ್ತೆ
ನೀಲ – ನೆಮ್ಮದಿಯಲ್ಲಿ ತಾನೆ ತಾನಾಗುತ್ತೆ
ಮೇಲು – ಮೆಲಕೆ ಏರಿ; ದೂರ ದೂರಕೆ ಸಾಗಿ,
ಗೌರಿಶಂಕರವಾಗಿ,
ಕೊನೆಯಲ್ಲಿ ನಿಂದಿತ್ತೆ, ಸಂದಿತ್ತೆ (ಗಾಂಧಿ ಎಂಬುವ.ಹೆಸರು, ಪುಟ.. ೮೩)

ಈ ಯುಗದ, ಈ ಜಗದ ಒಳುಮನದ ಧ್ರುವತಾರೆಯಾಗಿ ಎಂದು **'ಧ್ರುವತಾರೆ'** ಕವನದಲ್ಲಿ ಹೀಗೆ ಗಾಂಧೀಜಿಯ ಬದುಕು, ನೆಲಮುಗಿಲುಗಳನ್ನು ವ್ಯಾಪಿಸಿದ ಭವ್ಯತೆಗೆ ನೆಲೆಯಂತೆ ಚಿತ್ರಿಸಿದ್ದಾರೆ.

ಕವಿ ಗಂಗಾಧರ ಚಿತ್ತಾಲರು ಕೂಡ ಗಾಂಧೀಜಿಯವರನ್ನು ಮಹಾತ್ಮರೆಂಬಂತೆಯೇ ಚಿತ್ರಿಸಿದ್ದಾರೆ. ಅವರ **'ಮಹಾತ್ಮ '**ಎಂಬ ಕವನದಲ್ಲಿ ಗಾಂಧೀಜಿಯವರ ಹುತಾತ್ಮರಾದ ಸಂದರ್ಭದಲ್ಲಿ ಕವಿ ಮನಸು ನುಡಿಯುತ್ತದೆ. ಗಾಂಧೀಜಿಯವರ ಸಾವಿಗೆ ಇಡೀ ಪ್ರಕೃತಿಯೇ ಪ್ರತಿಸ್ಪಂದನ ನೀಡಿದೆಂಬಂತೆ ಚಿತ್ರಿಸುತ್ತಾರೆ.

'ನಿನ್ನ ನೆತ್ತರು ನೆಲಕೆ ಚೆಲ್ಲಿದಂದು
ಮಣ್ಣು ನಡುಗಿತು, ಹಲ ಹೂ ಬಾಡಿತು
ನರನು ಕೆರಳುವ ಹುಂಬ, ಬಾಳು ಯೂಪಸ್ತಂಭ
ಉತ್ತಮರ ಬಲಿ ಇಲ್ಲಿ "ಬಾನ್ ಆಡಿತು . . . ."

(ಗಾಂಧಿ ಎಂಬುವ ಹೆಸರು, ಪುಟ. ೭೪)

ಎಂದಿದ್ದಾರೆ.

ಕವಿ ಚಿದಂಬರ ದೀಕ್ಷಿತರು ಮತ್ತೊಂದು ಬಗೆಯಲ್ಲಿ ಗಾಂಧೀಜಿಯವರನ್ನು ತಮ್ಮ ಕವನವಾದ **'ಶಾಂತಿದೂತ'**ದಲ್ಲಿ ಶಾಂತಿಗೆ ಸಂಕೇತವಾಗಿ ವರ್ಣಿಸಿದ್ದಾರೆ. ತ್ಯಾಗ, ಅಹಿಂಸೆಯ ಪ್ರತೀಕವೇ ಗಾಂಧೀಜಿ ಎಂದು ವರ್ಣಿಸುವ ಕವಿ ದೀಕ್ಷಿತರು. ಹಿಂಸೆಯ ಕೊಲುವ ಅಹಿಂಸಾವಾದಿಯೆಂದು ಗಾಂಧೀಜಿಯವರನ್ನು ನೆನೆಯುತ್ತಾರೆ. ಮುಂದುವರೆದು ತಮ್ಮ ಕವನದಲ್ಲಿ ಮೌಲ್ಯಗಳ ಗಣಿಯಾಗಿದ್ದಾರೆ. ಗಾಂಧೀಜಿ ಎಂಬುದಾಗಿ ಚಿತ್ರಿಸಿದ್ದಾರೆ.

"ರಾಮರಹಿಮರನೊಂದು ಬಗೆವ ಕರುಣಾಸಿಂಧು
ಆ ರಾಮನಾಮಸ್ಮರಣ
ಕವಿಯ ಕನಸನು ನನಸೆನೆಸಗುತಿಹ ವಿಭೂತಿ
ಕವಿಗುರುವೆ ನೀನು ಕಾಣ" (ಅಮರನಾದೈ ತಂದೆ, ಪುಟ. ೭೪)

ಎಂಬುದಾಗಿ ಜಾತ್ಯಾತೀತ ಮನೋಭಾವದ ಆಶಾರೂಪವೆಂಬಂತೆ ಅವರ ವ್ಯಕ್ತಿತ್ವವನ್ನು ಕಟ್ಟಿಕೊಡುತ್ತಾರೆ.

ಸಮಾನತೆ, ಸರ್ವೋದಯದ ಹರಿಕಾರರಾದ ಗಾಂಧೀಜಿಯವರನ್ನು ಸಹಜ ಯೋಗಿಯೆಂದು ಕವಿ ಆನಂದಕಂದರು ತಮ್ಮ **'ಮಹಾತ್ಮನಿಗೆ'** ಕವನದಲ್ಲಿ ವರ್ಣಿಸಿದ್ದಾರೆ. ಗಾಂಧಿ ಎಂಬುವ ಹೆಸರೆ ಚೈತನ್ಯದ ಚಿಲುಮೆ, ಸೌಖ್ಯದ ಪ್ರತೀಕವಾಗಿದೆ ಎನ್ನುವ ಕವಿ

"ಮೈತ್ರಿಯಿಂದ ಶತ್ರುಗಳನು ಸೋಲಿಸಿರುವ ವೀರ
ಮೃತ್ಯುವನೂ ಮಿತ್ರನಂತೆ ಸ್ವಾಗತಿಸಿದ ಧೀರ
ನಿನ್ನ ನೌಕೆ ನಂಬಿದರನು ತಲ್ಪಿಸಿತ್ತೈ ತೀರ –
ನೀನು ನಡೆದ ದಾರಿಯದೇ ಸತ್ಯ ಧರ್ಮವೀರ

ನಮನವಿದೋ ನಮನವಿದೋ ಸಹಜಯೋಗಿ
ಸಮತೆಗಾಗಿ ಸರ್ವಸ್ವವ ತೆತ್ತ ಮಹಾತ್ಯಾಗಿ" (ಅಮರನಾದೈ ತಂದೆ, ಪುಟ. ೨೮)

ಎಂದು ಮಹಾತ್ಮರ ಮಹೋನ್ನತ ವ್ಯಕ್ತಿತ್ವ ತಮ್ಮ ಕವನದಲ್ಲಿ ಎಳೆ ಎಳೆಯಾಗಿ ಚಿತ್ರಿಸಿದ್ದಾರೆ.

ಕವಿ ಅರ್ಚಿಕ ವೆಂಕಟೇಶರಿಗೆ ಮಹಾತ್ಮ ಗಾಂಧೀಜಿಯವ ನಡೆ – ನುಡಿಗಳು, ಶಕ್ತಿ – ಸ್ಫೂರ್ತಿಯಾಗಿ ಗೋಚರಿಸಿವೆ. ಆ ಕಾರಣದಿಂದಲೇ **'ಬಾಪೂಜಿಗೆ'** ಎನ್ನುವ ಕವನದಲ್ಲಿ ಗಾಂಧೀಜಿಯ ವ್ಯಕ್ತಿತ್ವವನ್ನು

ಜಗದಗಲ ಮುಗಿಲಗಲ
ನಿನ್ನ ಮನ ಭಾವನಾ!

ನಿನ್ನ ದೃಷ್ಟಿ ಮೋಹನ!
ಇಡಿ ಜೀವನ ಪಾವನ!
ಇದು ಅರ್ಪಣ ತನುಮನ
ಬರಲಿ ಶಕ್ತಿ – ಇರಲಿ ಸ್ಫೂರ್ತಿ
ಅದುವೆ ನನ್ನ ಚಿಂತನ (ಅಮರನಾದ್ಯೆ ತಂದೆ, ಪುಟ. ೬)

ಎಂದು ವರ್ಣಿಸಿದ್ದಾರೆ.

ಮಲ್ಲಿಗೆಯ ಕವಿಯೆಂದೇ ಖ್ಯಾತರಾದ ಕೆ.ಎಸ್. ನರಸಿಂಹಸ್ವಾಮಿ ಅವರಿಗೆ, ಗಾಂಧೀಜಿ ಮೌಲ್ಯ, ಆದರ್ಶಗಳ ಗಣಿಯಾಗಿ ಕಂಡಿದ್ದಾರೆ. ಅವರ **'ಗಾಂಧೀಜಿಯ ಪಾದಕ್ಕೆ'** ಎಂಬ ಕವನ ಇದಕ್ಕೆ ನಿದರ್ಶನವೆಂಬಂತಿದೆ. ಭಾರತದ ದಾಸ್ಯ ಬಿಡಿಸಲೆಂದೇ ದೈವ ಕರುಣಿಸಿದ ಕಾರಣಿಕ ನೀನು ಎಂದು ಗಾಂಧಿಯನ್ನು ಚಿತ್ರಿಸುವ ಕೆ.ಎಸ್.ನ ಅವರು.

ನೊಂದವರ ತಾಯಾಗಿ ಸೇವೆಯನು ಸಲ್ಲಿಸಿದೆ;
ದೀನರಿಗೆ ನೆರಳಾದೆ ತಂದೆಯಾದೆ
ಕೊಲ್ಲ ಬಂದವನೆದೆಶೆ ಕ್ರಿಸ್ತನೊಲು ಕೈಮುಗಿದೆ;
– ಸಾಕ್ರಟೀಸ್! – ಮತ್ತೊಮ್ಮೆ ವಿಷವ ಕುಡಿದೆ. (ಅಮರನಾದ್ಯೆ ತಂದೆ, ಪುಟ. ೫೯)

ಚರಕದಲಿ ಸರಳತೆಯ ಇಂಪ ಬೆಳೆಸಿ ಭಾರತದ ಬಿಡುಗಡೆಗೆ ದುಡಿದು ನೀನು ತಾರಗೆಯಾದೆ ಎಂದು ಗಾಂಧೀ ವ್ಯಕ್ತಿತ್ವವನ್ನು ಚಿತ್ರಿಸುತ್ತಾರೆ.

೧೯೪೮ರ ಗಾಂಧೀಜಿಯ ಕೊಲೆ ದೇಶದ ಬದುಕಿಗೆ ಒದಗಿದ ಒಂದು ರುದ್ರ ನಾಟಕೀಯ ತಿರುವು. ಅಲ್ಲಿಯವರೆಗೆ 'ಗಾಂಧಿ ಅಂದರೆ ಇಂಡಿಯಾ' ಎಂಬಂತಿದ್ದ ಸಮೀಕರಣದ ಸೂತ್ರ ಹರಿದು ಹೋಗಿ 'ಗಾಂಧಿ' ಮತ್ತು 'ಇಂಡಿಯಾ' ನಡುವಿನ ಅಂತರ ಹೆಚ್ಚಾಗುತ್ತಲೇ ಹೋಯಿತು. ಗಾಂಧಿ ನಂಬಿದ ಮೌಲ್ಯಗಳೆಲ್ಲ ಎಮರ್ಜೆನ್ಸಿಯಲ್ಲಿ ಅದೇ ಹೆಸರಿನ ಮತ್ತೊಬ್ಬ ವ್ಯಕ್ತಿಯಿಂದ ಧ್ವಂಸಗೊಂಡಾಗ ಗಾಂಧಿ, ಆ ತುದಿಯಲ್ಲಿ ಮೌನವಾಗಿ ರೋಧಿಸುತ್ತಿದ್ದ ವ್ಯಂಗ್ಯಮೂರ್ತಿಯಾಗಿಯೇ ಕನ್ನಡ ಕವಿಗಳಿಗೆ ಕಂಡರು.

ಕವಿ ಸಿದ್ಧಲಿಂಗ ದೇಸಾಯಿ ಅವರು **'ಗಾಂಧಿ ನೆನಪು ಮತ್ಯಾಕ?'** ಎನ್ನುವ ಕವನದಲ್ಲಿ ಗಾಂಧಿಯ ಚಿಂತನೆಗಳು ಇಂದು ಭ್ರಷ್ಟಾಚಾರದ ಭಾರತದಲ್ಲಿ ನಿಷಿದ್ಧ ಎಂಬಂತೆ ಚಿತ್ರಿಸಿವೆ.

ಸತ್ತವನು ಸತ್ತ ಮತ್ಯಾಕವನ ಸುದ್ದಿ
ಇದ್ದಿದ್ರ ಇರತಿದ್ದ
ಈಗವನೂ ಒಳಗ (ಗಾಂಧಿ, ಪುಟ. ೦೫)

ಎಂಬಂತೆ ಮಾರ್ಮಿಕವಾಗಿ ಚಿತ್ರಿಸಿ ಗಾಂಧಿ ತತ್ತ್ವಗಳು ಮಾಯವಾಗಿದೆ ಎಂಬುದನ್ನು ತಿಳಿಸುತ್ತಾರೆ. **'ಗುಲಾಬಿ ಮಂದಿ'** ಎಂಬ ಕವನದಲ್ಲಿ ಕವಿ ಅಲ್ಲಮಪ್ರಭು ಬೆಟ್ಟದೂರರು ಗಾಂಧಿಯ ಎಲ್ಲಾ ಚಿಂತನೆಗಳು ಇಂದು ನಿರ್ನಾಮವಾಗಿವೆ ಎಂಬುದನ್ನು ಸಾಬೀತು ಪಡಿಸುವಂತಿದೆ. ಅವರ ಈ ಕವನ

ಸ್ವಾತಂತ್ರ್ಯ ತಂದಿ ; ಮಜಾ ಮಾಡಕತ್ಯಾವ ನೂರ ಹಂದಿ
ಸತ್ಯ ನುಡಿ ಅಂದಿ ; ಬಿದ್ದವು ಗಟಾರದೊಳಗೆ ಕುಡದ ಸಿಂದಿ
ಅಹಿಂಸಾ ವ್ರತ ಅಂದಿ; ನಿನ್ನನ್ನೇ ಕೊಂದರು ತಂದಿ

(ಗಾಂಧಿ, ಪುಟ. ೬೭)

ಎಂದು ಮಾರ್ಮಿಕವಾಗಿ ಇಂದು ಗಾಂಧೀ ಮೌಲ್ಯಗಳು ಹಾದಿತಪ್ಪಿರುವುದನ್ನು ನಿರೂಪಿಸುತ್ತವೆ.

**'ಮೊಳೆಯೇ, ನೀನೇ ಧನ್ಯ'** ಎಂಬ ಕವನದಲ್ಲಿ ಯುವಕವಿ ನ.ಹ. ಕಬಗೇರಿಯವರು ಗಾಂಧಿ ಇಂದು ಕೇವಲ ಫೋಟೋದಲ್ಲಿ ಮಾತ್ರ ಜೀವಂತವಿದ್ದಾರೆಯೇ ವಿನಃ ನೈಜತೆಯಲ್ಲಿ ಅಲ್ಲ ಎಂಬುದನ್ನು

ಅಖಂಡ ಭಾರತದಲ್ಲಿ
ಯಾರಾದರು ಗಾಂಧಿಯನ್ನು
ಎತ್ತಿಹಿಡಿದಿದ್ದರೆ, ನೀನೊಬ್ಬನೆ
ಅದಕ್ಕೆಮೊಳೆಯೇ ನೀನು ಧನ್ಯ (ಗಾಂಧಿ ಎಂಬುವ ಹೆಸರು, ಪುಟ ೨೩೩)

ಎಂದು ವಿಡಂಬನಾತ್ಮಕ ನೆಲೆಯಲ್ಲಿ ಗಾಂಧಿಯ ನೆಲೆಯನ್ನು ಚಿತ್ರಿಸಿದ್ದಾರೆ.

ಸ್ವಾತಂತ್ರ್ಯ ನಂತರದ ಕವನಗಳಲ್ಲಿ ಗಾಂಧಿ ಕುರಿತ ಚಿತ್ರಣ ದೊರಕುವ ಕವನಗಳೆಂದರೆ ವಿನಾಯಕರ – ಗಾಂಧೀಜಿ, ಅಡಿಗರ – ಗಾಂಧಿ, ಕೆ.ಎಸ್.ನ ಅವರ ಗಾಂಧಿ ಸ್ತವನ, ಜಿ.ಎಸ್.ಎಸ್. ಅವರ – ಗಾಂಧಿ, ಕಣವಿಯವರ – ಆದರೂ ಅವನ ನೆನಪು, ಶಾಂತರಸರ – ಗಾಂಧಿ ಎಂಬುವ ಹೆಸರು, ಪಾಂಡೇಶ್ವರ ಗಣಪತಿರಾವ್ ಅವರ – ಮಹಾತ್ಮಗಾಂಧಿಗೆ, ದಿನಕರ ದೇಸಾಯಿ ಅವರ ಗಾಂಧೀಯವರ ಸ್ಮಾರಕ, ಗಂಗಾಧರ ಚಿತ್ತಾಲರ – ಮಹಾತ್ಮ, ರಾಮಚಂದ್ರ ಶರ್ಮಾರ – ಇಂದಿಲ್ಲವೇ ಆ ದೇವಮಾನವ, ಪಾ.ವೆಂ. ಆಚಾರ್ಯರ – ಗಾಂಧಿಗೆ, ಬಿ.ಎ. ಸನದಿ ಅವರ – ನಾವೂ ನಿನ್ನವರು, ಸಾ.ಶಿ. ಮರುಳಸಿದ್ಧಯ್ಯ ಅವರ – ಗಾಂಧಿ, ಸು.ರಂ. ಎಕ್ಕುಂಡಿ ಅವರ – ಗಾಂಧೀಜಿ, ಕೆ.ಎಸ್. ನಿಸಾರ್ ಅಹಮದ್ ಅವರ – ಬಾಪೂ, ಸುಬ್ರಾಯ ಚೊಕ್ಕಾಡಿ ಅವರ –

ಬಾಪೂ ಜತೆ ಮಾತುಕತೆ, ಚಂಪಾ ಅವರ ಗಾಂಧಿಸ್ಮರಣೆ, ಪ. ಕುಲಕರ್ಣಿ ಅವರ ಗಾಂಧೀಜಿ ಇತ್ಯಾದಿ ಕವನಗಳು ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಗಾಂಧೀಜಿ ಕುರಿತು ಚಿತ್ರಿಸಿದ ಕವನಗಳಾಗಿವೆ. ಈ ಎಲ್ಲಾ ಕವನಗಳು ಕೂಡ ಒಂದೇ ವ್ಯಕ್ತಿಯನ್ನು ಕುರಿತವುಗಳಾದರೂ ಸ್ವಾತಂತ್ರ್ಯ ನಂತರದ ಸಂದರ್ಭದಲ್ಲಿ ರಚಿತವಾದವುಗಳು ಆದುದರಿಂದ ಗಾಂಧೀಜಿಯ ಮೌಲ್ಯ, ಚಿಂತನೆ, ಆದರ್ಶಗಳು, ಆರಾಧನಾಭಾವ ಗಳಲ್ಲಿಷ್ಟೇ ಅಲ್ಲದೇ ಗಾಂಧೀಜಿಯ ಸಿದ್ಧಾಂತದ ಮೇಲಿನ ಚರ್ಚೆಯನ್ನು ಈ ಕವನಗಳ ವಸ್ತು ಒಳಗೊಂಡಿದೆ.

ಸ್ವಾತಂತ್ರ್ಯೋತ್ತರ ಕವನಗಳಲ್ಲಿ ತೀ.ನಂ.ಶ್ರೀ ಅವರ **'ಗಾಂಧಿ'** ಕವನ ಅತ್ಯಂತ ಮುಖ್ಯವಾದುದು. ಈ ಕವನದಲ್ಲಿ ತೀ.ನಂ.ಶ್ರೀ ಅವರು ಗಾಂಧೀಜಿಯವರ ಮೌಲ್ಯಾದರ್ಶಗಳ ನೆಲೆಯಲ್ಲಿ ಕವನ ನಿರ್ಮಾಣ ಮಾಡಿದ್ದಾರೆ. ಹಿಂಸೆಯ ಮಾರಕತೆಯನ್ನು ಜಗಕೆ ತಿಳಿಸಿದ ಮಹಾಗುರು ಶ್ರೀಯವರು. ಗಾಂಧಿಯವರನ್ನು ವರ್ಣಿಸಿದ್ದಾರೆ. ಕೇವಲ ಸತ್ಯ, ಅಹಿಂಸೆ, ಅಸಹಕಾರಗಳಿಂದಲೇ ತಾಳ್ಮೆ, ಸೌಜನ್ಯಯುತ ಸಹನೆಯಿಂದಲೇ ಭಾರತದ ಭವ್ಯಮಾನವನಾದೆ ಎಂದೆಲ್ಲಾ ತಮ್ಮ 'ಗಾಂಧಿ' ಕವನದಲ್ಲಿ ಗುಣಗಾನ ಮಾಡಿದ್ದಾರೆ.

ಕವಿ ಚಿದಂಬರ ದೀಕ್ಷಿತರು ಮತ್ತೊಂದು ಬಗೆಯಲ್ಲಿ ಗಾಂಧೀಜಿಯವರನ್ನು ತಮ್ಮ ಕವನವಾದ **"ಶಾಂತಿದೂತ"**ದಲ್ಲಿ ಶಾಂತಿಗೆ ಸಂಕೇತವಾಗಿ ವರ್ಣಿಸಿದ್ದಾರೆ. ತ್ಯಾಗ, ಅಹಿಂಸೆಯ ಪ್ರತೀಕವೇ ಗಾಂಧೀಜಿ ಎಂದು ವರ್ಣಿಸುವ ಕವಿ ದೀಕ್ಷಿತರು. ಹಿಂಸೆಯ ಕೊಲುವ ಅಹಿಂಸಾವಾದಿಯೆಂದು ಗಾಂಧೀಜಿಯವರನ್ನು ನೆನೆಯುತ್ತಾರೆ. ಮುಂದುವರೆದು ತಮ್ಮ ಕವನದಲ್ಲಿ ಮೌಲ್ಯಗಳ ಗಣಿಯಾಗಿದ್ದಾರೆ. ಗಾಂಧೀಜಿ ಎಂಬುದಾಗಿ ಚಿತ್ರಿಸಿದ್ದಾರೆ.

"ರಾಮರಹಿಮರನೊಂದು ಬಗೆವ ಕರುಣಾಸಿಂಧು
ಆ ರಾಮನಾಮಸ್ಮರಣ
ಕವಿಯ ಕನಸನು ನನಸೆನೆಸಗುತಿಹ ವಿಭೂತಿ
ಕವಿಗುರುವೆ ನೀನು ಕಾಣ" (ಅಮರನಾದೈ ತಂದೆ, ಪುಟ. ೭೪)

ಎಂಬುದಾಗಿ ಜಾತ್ಯಾತೀತ ಮನೋಭಾವದ ಆಶಾರೂಪವೆಂಬಂತೆ ಅವರ ವ್ಯಕ್ತಿತ್ವವನ್ನು ಕಟ್ಟಿಕೊಡುತ್ತಾರೆ.

ಸಮಾನತೆ, ಸರ್ವೋದಯದ ಹರಿಕಾರರಾದ ಗಾಂಧೀಜಿಯವರನ್ನು ಸಹಜ ಯೋಗಿಯೆಂದು ಸಹಜ ಯೋಗಿಯೆಂದು ಕವಿ ಆನಂದಕಂದರು ತಮ್ಮ **'ಮಹಾತ್ಮನಿಗೆ'** ಕವನದಲ್ಲಿ ವರ್ಣಿಸಿದ್ದಾರೆ. ಗಾಂಧಿ ಎಂಬುವ ಹೆಸರೆ ಚೈತನ್ಯದ ಚಿಲುಮೆ, ಸೌಖ್ಯದ ಪ್ರತೀಕವಾಗಿದೆ ಎನ್ನುವ ಕವಿ

"ಮೈತ್ರಿಯಿಂದ ಶತ್ರುಗಳನು ಸೋಲಿಸಿರುವ ವೀರ
ಮೃತ್ಯುವನೂ ಮಿತ್ರನಂತೆ ಸ್ವಾಗತಿಸಿದ ಧೀರ
ನಿನ್ನ ನೌಕೆ ನಂಬಿದರನು ತಲ್ಪಿಸಿತ್ಯೆ ತೀರ –
ನೀನು ನಡೆದ ದಾರಿಯದೇ ಸತ್ಯ ಧರ್ಮವೀರ

ನಮನವಿದೋ ನಮನವಿದೋ ಸಹಜಯೋಗಿ
ಸಮತೆಗಾಗಿ ಸರ್ವಸ್ವವ ತೆತ್ತ ಮಹಾತ್ಯಾಗಿ" (ಅಮರನಾದ್ಯೆ ತಂದೆ, ಪುಟ. ೨೮)

ಎಂದು ಮಹಾತ್ಮರ ಮಹೋನ್ನತ ವ್ಯಕ್ತಿತ್ವ ತಮ್ಮ ಕವನದಲ್ಲಿ ಎಳೆ ಎಳೆಯಾಗಿ ಚಿತ್ರಿಸಿದ್ದಾರೆ.

ಕವಿ ಅರ್ಚಿಕ ವೆಂಕಟೇಶರಿಗೆ ಮಹಾತ್ಮ ಗಾಂಧೀಜಿಯವ ನಡೆ – ನುಡಿಗಳು, ಶಕ್ತಿ – ಸ್ಪೂರ್ತಿಯಾಗಿ ಗೋಚರಿಸಿವೆ. ಆ ಕಾರಣದಿಂದಲೇ **'ಬಾಪೂಜಿಗೆ'** ಎನ್ನುವ ಕವನದಲ್ಲಿ ಗಾಂಧೀಜಿಯ ವ್ಯಕ್ತಿತ್ವವನ್ನು

ಜಗದಗಲ ಮುಗಿಲಗಲ
ನಿನ್ನ ಮನ ಭಾವನಾ!
ನಿನ್ನ ದೃಷ್ಟಿ ಮೋಹನ!
ಇಡಿ ಜೀವಜ ಪಾವನ!
ಇದು ಅರ್ಪಣ ತನುಮನ
ಬರಲಿ ಶಕ್ತಿ – ಇರಲಿ ಸ್ಫೂರ್ತಿ
ಅದುವೆ ನನ್ನ ಚಿಂತನ (ಅಮರನಾದ್ಯೆ ತಂದೆ, ಪುಟ. ೬)

ಎಂದು ವರ್ಣಿಸಿದ್ದಾರೆ.

ಮಲ್ಲಿಗೆಯ ಕವಿಯೆಂದೇ ಖ್ಯಾತರಾದ ಕೆ.ಎಸ್. ನರಸಿಂಹಸ್ವಾಮಿ ಅವರಿಗೆ, ಗಾಂಧೀಜಿ ಮೌಲ್ಯ, ಆದರ್ಶಗಳ ಗಣಿಯಾಗಿ ಕಂಡಿದ್ದಾರೆ. ಅವರ **'ಗಾಂಧೀಜಿಯ ಪಾದಕ್ಕೆ'** ಎಂಬ ಕವನ ಇದಕ್ಕೆ ನಿದರ್ಶನವೆಂಬಂತಿದೆ. ಭಾರತದ ದಾಸ್ಯ ಬಿಡಿಸಲೆಂದೇ ದೈವ ಕರುಣಿಸಿದ ಕಾರಣಿಕ ನೀನು ಎಂದು ಗಾಂಧಿಯನ್ನು ಚಿತ್ರಿಸುವ ಕೆ.ಎಸ್.ನ ಅವರು.

ಇಳೆಗ ದರ್ಪವನು ಪರಮತತ್ತ್ವನು ತೋಳೆತ್ತಿ
ಉಸಿರ ಬಲವುಳ್ಳನಕ ಸಾರಿದ ಗುರು ;
ದರ್ಪವನು ಧೈರ್ಯದಲಿ, ಶಸ್ತ್ರವನು ಸಹನೆಯಲಿ
ಶಠತೆಯನು ಸತ್ಯದಲಿ ಜಯಿಸಿದ ಕಲಿ
ಹುಡಿಯ ಹುಳುಗಳನೆತ್ತಿ ವಜ್ರ ಹೃದಯವ ಬಿತ್ತಿ
ವೀರ ಜನ್ಮವನಿತ್ತ ಹಿರಿಯ ತಂದೆ (ಗಾಂಧಿ ಎಂಬುವ ಹೆಸರು, ಪುಟ ೩೫)

ಹೀಗೆ ಗಾಂಧಿಯವರನು ಕವಿ ಮನಸು ಯಥೋಚಿತ ಗುಣಗಳಿಂದಲೇ ವರ್ಣಿಸಿ ಸಂಭ್ರಮಿಸಿದೆ.

ಗಾಂಧೀಜಿ ಓರ್ವ ವ್ಯಕ್ತಿಯಲ್ಲ ಶಕ್ತಿ ಎಂಬುದು ವಿನಾಯಕರ ಅಭಿಮತ. ಗಾಂಧೀಜಿಯ ಗುಣಗಳೇ ಅವರನ್ನು ಮಹಾತ್ಮರನ್ನಾಗಿಸಿತು ಎನ್ನುವ ಕವಿ **'ಗಾಂಧೀಜಿ'** ಹೆಸರಿನ ಕವನದಲ್ಲಿ.

ಜಡಜೀವವ್ಯೂಹ ಸುತ್ತಿರುವೀ ಪ್ರಪಂಚದಲ್ಲಿ
ಊರಿದನು ಚೈತನ್ಯವ

ಎಂದು ವರ್ಣಿಸುತ್ತಲೇ

ಕರೆಯದವನ ಓ ತಮ್ಮ! ಓ ಅಣ್ಣ! ಕರೆ ಅವನನು
ಕಣ್ತುಂಬ ನಮ್ಮ ನಡುವೆ (ಗಾಂಧಿ ಎಂಬುವ ಹೆಸರು, ಪುಟ ೫೦)

ಎಂದು ಪ್ರಾರ್ಥಿಸುತ್ತಾರೆ. ಗಾಂಧೀ ಎಂದಿಗೂ ಜೀವಂತವಿರಬೇಕೇ ವಿನಃ ದಂತಕಥೆಯಾಗಬಾರದು ಎಂಬ ಎಚ್ಚರಿಕೆಯನ್ನು ಕವಿ ನೀಡಿದ್ದಾರೆ.

ಸಮನ್ವಯ ಸಾಲಿನ ಕವಿಗಳಲ್ಲಿ ಕಾಣುವ ಅಡಿಗರು ಸಹ ಗಾಂಧಿ ಛಾಯೆಯಿಂದ ದೂರವಾಗಿಲ್ಲ. ಅವರ **'ಗಾಂಧಿ'** ಎನ್ನುವ ಕವನದಲ್ಲಿ ಸುದೀರ್ಘವಾಗಿಯೇ ಗಾಂಧೀ ಮಹತ್ವವನ್ನು ವರ್ಣಿಸಿದ್ದಾರೆ.

ಗಾಂಧಿ, ಗಾಂಧಿ, ಗಾಂಧಿ!
ಈ ಬಚ್ಚಲ ಕಗ್ಗವಿಯಲಿ
ತಮದ ಸಂತೆ ಗದ್ದಲದಲಿ
ಬಂತೆಲ್ಲಿಂದೆಂತು ಹೇಳು
ಈ ಅಮೂಲ್ಯ ಮಾಲು
ನಾಲಗೆ ಗುಡಿ ಚೆಂಬೆಳಕಲಿ
ಕುಡಿ ದೀಪದ ಸಾಲು? (ಗಾಂಧಿ ಎಂಬುವ ಹೆಸರು, ಪುಟ ೫೧)

ಎಂದು ಗಾಂಧೀಜಿಯ ಅಮೂಲ್ಯ ಹೆಸರನ್ನು ಸ್ಥಾಪಿಸುತ್ತ ಹೊರಡುವ ಕವಿತೆ ಗಾಂಧೀಯ ಮಹೋನ್ನತ ಗುಣಗಳಿಂದಲೇ, ತತ್ವಾದರ್ಶಗಳಿಂದಲೇ ಲೋಕಕ್ಕೆ ಹಿತವೆಂಬುದನ್ನು ಕತ್ತಲಿಗೆ ಬೆಳಕನೀವ ಸೂರ್ಯನೆಂಬಂತೆ ಬೆಳಕಿನ ಮೂಲ ತಮಕೆ ಎಂದೆಂದಿಗೂ ಎಂದು ಗಾಂಧಿಯ ಮಹತ್ವವನ್ನು ಸಾರಿದ್ದಾರೆ.

ಮಲ್ಲಿಗೆಯ ಕವಿಯೆಂದೇ ಜನಪ್ರಿಯರಾಗಿರುವ ಕೆ.ಎಸ್. ನರಸಿಂಹಸ್ವಾಮಿ ಅವರು ಗಾಂಧೀಜಿಯವರನ್ನು ಕುರಿತು ಚಿತ್ರಿಸಿದ ಕವನ **'ಗಾಂಧಿಸ್ತವನ'**.

ಮಹಾಮಾನವತೆಯ ಸಾಕಾರಮೂರ್ತಿಯಾದ ಗಾಂಧೀಜಿ ಲೋಕಸೇವೆಗೆ ತಮ್ಮನ್ನೇ ಮುಡಿಪು ಮಾಡಿಕೊಂಡವರು. ಆದರೆ, ಆ ಲೋಕವೆ ಅವರನು ಬಲಿ ಪಡೆಯಿತು ಎಂದು ಚಿತ್ರಿಸುತ್ತಲೇ ಗಾಂಧೀಜಿಯವರಲ್ಲಿದ್ದ ಮಹತ್ವಾಕಾಂಕ್ಷೆಯನ್ನು ಅದರ ಮೂಲಕ ಭಾರತೀಯರ ಜಡತ್ವವನ್ನು ಹೋಗಲಾಡಿಸಿ ಭರವಸೆಯ ನೆರಳು ಸೃಷ್ಟಿಸಿದ ಧೀಮಂತ ಗಾಂಧೀಜಿ ಎಂಬುದಾಗಿ ವರ್ಣಿಸುತ್ತಾರೆ. ಆಂಗ್ಲರ ಒಡಲಿನಿಂದ ಬೇರ್ಪಡಿಸಲು ಗಾಂಧೀಜಿ ಹಾಕಿಕೊಂಡ ಮಾರ್ಗಗಳು ಅನಂತರದಲ್ಲಿ ಸಾಧಿಸಿದ ಬಲ – ಸಂವರ್ಧನೆ ಇತ್ಯಾದಿಗಳಿಂದ ಕವನ ಸಾರ್ಥಕತೆ ಪಡೆದಿದೆ.

ಕಣವಿಯವರ **'ಆದರೂ ಅವನ ನೆನಪು'** ಗಾಂಧೀಜಿಯವರನ್ನು ಕುರಿತು ಬರೆದ ಕವನಗಳಲ್ಲಿ ಒಂದು. ತನ್ನದೇ ಆದ ಸಿದ್ಧಾಂತಗಳಿಗೆ ಬದ್ಧನಾಗಿ ಸ್ವಾತಂತ್ರ್ಯ ಸಂಪಾದಿಸಿಕೊಟ್ಟ ಗಾಂಧೀ ಪ್ರಣೀತವಾದ ಸ್ವಾತಂತ್ರ್ಯಕ್ಕೆ ವರ್ತಮಾನದ ಮುಂದಿನ ದಿನಗಳಲ್ಲಿ ದಕ್ಕೆಯಾದರೆ ಎಂಬ ಸಂದೇಹ ಕವಿಗೆ ಕಾಡಿ ಮತ್ತೆ ಮತ್ತೆ ಗಾಂಧಿಯ ನೆನಪು ಪುನರಾವರ್ತನೆಯಾಗುವುದನ್ನು ಕವನ ವರ್ಣಿಸುತ್ತದೆ.

ಶಾಂತರಸರ **'ಗಾಂಧಿ ಎಂಬುವ ಹೆಸರು'** ಸ್ವಾತಂತ್ರ್ಯ ನಂತರದ ಗಾಂಧೀ ಕುರಿತ ಕವನಗಳಲ್ಲಿ ಒಂದು. ಗಾಂಧೀಜಿ ಎಂದೆಂದಿಗೂ ಅಜರಾಮರವೆನ್ನುವ ಕವಿ. ಮಹಾತ್ಮರನು ಜನ ಅರ್ಥ ಮಾಡಿಕೊಳ್ಳದೇ ಅವರ ಎದೆಗೆ ಗುಂಡಿಟ್ಟುಕೊಂಡ ಬಗೆಯನ್ನು ವರ್ಣಿಸುತ್ತದೆ ಕವನ. ತನ್ನವರಿಗಾಗಿ ತನ್ನೆಲ್ಲಾ ತನು – ಮನ – ಧನಗಳನ್ನು ಮೀಸಲಿಟ್ಟ ಮಹಾತ್ಮನಿಗೆ ನಾವು ಕೊಟ್ಟ ಉಡುಗೊರೆ ಅವನ ಸಾವು ಎಂದು ಮರುಗುವ ಕವಿ ಜಗದ ಅಜ್ಞಾನಕ್ಕೆ ಮತ್ತೊಂದು ಬಲಿ ಎನ್ನುತ್ತಾ ಕೊರಗುತ್ತಾನೆ.

ಎದೆಗೆ ಬಡಿಯಿತು ಗುಂಡು "ಹಾ ರಾಮಾ ಹಾ ರಾಮ"
ಹಿಂಸೆಯೆದೆಯಲಿ ಬರೆದ ರಾಮನಾಮವನು
ತನ್ನ ಅಜ್ಞಾನಕ್ಕೆ ಬಲಿಕೊಟ್ಟಿತೀ ವಿಶ್ವ
ಮತ್ತೋಮ್ಮೆ : ಆ ಕ್ರೈಸ್ತಬಸವ ಬುದ್ಧ"

(ಗಾಂಧಿ ಎಂಬುವ ಹೆಸರು, ಪುಟ ೭೦)

ಎಂಬ ವಿಷಾದದೊಂದಿಗೆ ಕವನಕ್ಕೆ ತೆರೆಬೀಳುತ್ತದೆ.

**'ಮಹಾತ್ಮಾ ಗಾಂಧಿಗೆ'** ಎನ್ನುವ ಪಾಂಡೇಶ್ವರ ಗಣಪತಿರಾಯರ ಈ ಕವನ ಗಾಂಧಿಯ ಜೀವನದ ಘಟನಾವಳಿಗಳ ಮೇಲೆ ಬೆಳಕು ಚೆಲ್ಲುವ ಪ್ರಯತ್ನವಿದೆ.

ನಗುತ್ತಲೇ ದಾಸ್ಯವನು ಹೊತ್ತಿದ್ದ ಭಾರತಕೆ. ದಾಸ್ಯದಿಂದ ಮುಕ್ತಿ ಮೂಡಿಸಲು ಭಾರತಾಂಬೆಯ ಗರ್ಭದಲಿ ಜನಿಸಿದ ಬಂದ ಉದಾತ್ತ ಸಾತ್ವಿಕ ರೂಪನೇ ಗಾಂಧಿ ಎನ್ನುವ ಕವಿ.

ನಲಿವಿಂದ ಗೆಲವಿಂದ ಗೆದ್ದೆ, ಭಾರತಭದ್ರ
ನಿನ್ನ ಹೊರತಾರುಂಟು ಗಾಂಧಿ? ನಮಗಿಂದು
ನಿನ್ನ ಜೀವನ ಭಾರತ ವಜ್ರದ ಮುಂದು

(ಗಾಂಧಿ ಎಂಬುವ ಹೆಸರು, ಪುಟ ೭೨)

ಎಂಬ ವರ್ಣನೆಯೊಂದಿಗೆ ಮುಗಿಯುತ್ತದೆ.

ಗಂಗಾಧರ ಚಿತ್ತಾಲರು ಗಾಂಧಿಯನ್ನು ಕುರಿತು ಬರೆದ ಕವನವಾದ **'ಮಹಾತ್ಮ'**ದಲ್ಲಿ ಗಾಂಧಿಯ ದಾರುಣ ಸಾವಿನ ಚಿತ್ರಣವನ್ನು ಕಟ್ಟಿಕೊಡುತ್ತಾರೆ.

ನಿನ್ನ ನೆತ್ತರು ನೆಲಕೆ ಚೆಲ್ಲಿದಂದು
ಮಣ್ಣು ನಡುಗಿತು, ಹಗಲ ಹೂ ಬಾಡಿತು.
ನರನು ಕೆರಳುವ ಹುಂಬ, ಬಾಳು ಯೂಪಸ್ತಂಭ
ಉತ್ತಮರ ಬಲಿ ಇಲ್ಲಿ – ಬಾನಾಡಿತು
ಮನುಕುಲದ ರಕ್ತಮಯ ಇತಿಹಾಸ ಕೂಗಿತ್ತು –
ನೆಲವು ನಂದನವಾಗಲೇನು ಬೇಕು? (ಗಾಂಧಿ ಎಂಬುವ ಹೆಸರು, ಪುಟ ೭೪)

ಎಂಬಂತೆ ಕ್ರೂರ ಕಾಲನ ಕರೆಗೆ – ಕ್ರೌರ್ಯದ ನರನ ಮರಳುತನದಿಂದ ಬಲಿಯಾದ ಗಾಂಧೀಜಿಯವರಿಗೆ ಕವಿ ಜಗತ್ತಿನ ಬೆಳಕು ಹಾರಿ ಹೋಯಿತು ಎಂದೇ ಬಣ್ಣಿಸಿದ್ದಾರೆ.

ರಾಮಚಂದ್ರ ಶರ್ಮಾ ಅವರು ಗಾಂಧೀಯವರನ್ನು ದೇವಮಾನವನಿಗೆ ಹೋಲಿಸಿದ್ದಾರೆ. ಜಗಕೆ ಬೆಳಕಾಗಿದ್ದ, ಜಗದ ರಥವ ಮುನ್ನಡೆಸುವ ಸಾರಥಿಯಾಗಿದ್ದ, ನೊಂದವರ ಕಂಬನಿ ಒರಿಸಿದ ಕರುಣಾಳು ಕಾಲನ ಕ್ರೌರ್ಯಕ್ಕೆ ಬಲಿಯಾದದನ್ನು ಸಂದರ್ಭಕ್ಕೆ ತಕ್ಕಂತೆ **'ಇಂದಿಲ್ಲವೇ ಆ ದೇವಮಾನವ'** ಎಂಬ ಕವನದಲ್ಲಿ ವರ್ಣಿಸಿದ್ದಾರೆ.

ದೀನ ದಲಿತರ ಸೇವೆಯೊಳು ಸ್ವರ್ಗಸುಖವೆಂದೆ,
ಜಗದ ಹಿತಕೆ ದುಡಿದೆ, ಜನ ನಿನಗಿತ್ತ ಫಲವೇನು?

ಹಿಂಸೆ ಬೇಡಂದವಗೆ, ಹಿಂಸೆಯೊಳೆ ಮರಣವೇ?
ಕಟು ನುಡಿಯದವನೆದೆಗೆ ಕಠಿಣತಮ ಕಬ್ಬಿಣವೆ!
ಬರದೆ ಮಾನವದೇವರಿಳೊಯೊಳುಳಿಯುವ ಕಾಲ?
ಅಥವ ಬಂದಿದೆಯೇನೊ, ಈ ಲೋಕದಳಿಗಾಲ.

(ಗಾಂಧಿ ಎಂಬುವ ಹೆಸರು, ಪುಟ ೭೫)

ಹಿಂಸೆಯನು ತ್ಯಜಿಸಿ ಜಗತ್ತಿಗೆ ಅಹಿಂಸೆಯೇ ಪರಮಶ್ರೇಷ್ಟವೆಂದ ಬಾಪೂವಿಗೆ ಹಿಂಸೆಯೇ ಸಾವನ್ನ ತಂದೊಡ್ಡಿತು ಎನ್ನುವ ಕವಿ.ಮೃದು ಹೃದಯದ ಬಾಪೂವಿನೆದೆಗೆ ಕಬ್ಬಿಣದ ಗುಂಡು ಸಾವ ತಂದಿತು. ಗಾಂಧೀಜಿಯ ಸಾವು ಈ ಲೋಕದ ಅಳಿವಿಗೆ ಧರ್ಮದ, ಶಾಂತಿಯ ಮಾರಣ ಹೋಮಕ್ಕೆ ನಾಂದಿಯಾಯಿತು ಎಂದಿದ್ದಾರೆ.

ಹಿರಿಯ ಕವಿ ಪಾ.ವೆಂ. ಆಚಾರ್ಯರ ದೃಷ್ಟಿಯಲ್ಲಿ ಗಾಂಧೀಯನ್ನು ದೇವರು ಎಂದು ಒಪ್ಪಿಕೊಳ್ಳಲು ಜಗಕೆ ಇಷ್ಟವಿಲ್ಲ. ಏಕೆಂದರೆ ಗಾಂಧೀ ಮಾನವ ರೂಪಿ. ಅದಕೆ ಅವರನ್ನು ದೇವರಾಗಿಸಲು ಈ ಲೋಕ ಅವರ ಬಲಿ ಪಡೆಯಿತು. ಇಂತಹ ಹಳೆಸತ್ಯಕ್ಕೆ ಗಾಂಧಿ ಹೊಸ ದೃಷ್ಟಾಂತವಾದರೆಂದು ವಿಷಾದಿಸುತ್ತಾರೆ. ತಮ್ಮ **'ಗಾಂಧಿಗೆ'** ಕವನದಲ್ಲಿ

ಅವತಾರಕ್ಕಾಗಿ ಕಾಯುತ್ತಿರಲು ನಾವು.
ಉದ್ಧಾರ ಮಾಡೋಣವೆಂದು ನೀ ಹೊರಟೆ ಮುಂದೆ
ಮನುಷ್ಯರನ್ನು ಕೊಂದೇ ದೇವರು ಮಾಡಬೇಕು
ಈ ಹಳೇ ಸತ್ಯಕ್ಕೆ ನೀ ಹೊಸ ದೃಷ್ಟಾಂತವಾದೆ. (ಗಾಂಧಿ ಎಂಬುವ ಹೆಸರು, ಪುಟ. ೮೪)

ಗಾಂಧೀಜಿಯ ಮೌಲ್ಯಗಳು, ಆದರ್ಶಗಳು. ಸದಾ ಅನುರಣೀಯವಾದವು. ಅದನ್ನು ಸದಾ ನಾವು ಜಾಗೃತವಾಗಿರಿಸುವ ಮೂಲಕ ಗಾಂಧೀಯವರನ್ನು ಜೀವಂತವಿರಿಸಬೇಕೆಂಬ ಸಂದೇಶ ಚೆಲ್ಲುವ ಕವನ ಬಿ.ಎ. ಸನದಿ ಅವರ **"ನಾವೂ ನಿನ್ನವರು"**.

"ಕರುಣಾಳು ಬಾ ಬೆಳಕೆ, ಮುಸುಕಿದೀ ಮಬ್ಬಿನಲಿ
ಕೈ ಹಿಡಿದು ನಡೆಸೆಂದು ಗೋಳ್ಗರೆವ ಜನಗಳಿಗೆ
ಜನ್ಮ ಜನ್ಮಾಂತರದ ದಾರಿ ತೋರಿಸಿ, ಕೊನೆಗು
ನಿಂದಲ್ಲಿಯೆ ನಿಂದು ನಿನ್ನನ್ನು ನೆನೆವರು
ನಂಬು ನಮ್ಮಪ್ಪಾ, ನಾವೂ ನಿನ್ನವರು (ಗಾಂಧಿ ಎಂಬುವ ಹೆಸರು, ಪುಟ. ೮೮)

ಎನ್ನುವ ಕವಿ ಮನಸ್ಸು, ಗಾಂಧೀಜಿಯವರ ತತ್ವಾದರ್ಶಗಳಿಗೆ, ನೀತಿ ನಿಯಮಗಳಿಗೆ ಬದ್ಧರಾಗಿರುತ್ತೇವೆ ಎಂಬ ಸಂದೇಶವನ್ನು ನಾವೂ ನಿನ್ನವರೆಂಬ ಕವನದ ಮೂಲಕ ನೀಡಲು ಯತ್ನಿಸಿದೆ.

**'ಹೇ ರಾಮ'** ಕವನವನ್ನು ಕಯ್ಯಾರರು ದೆಹಲಿಯ ರಾಜಘಾಟಿನಲ್ಲಿರುವ ಗಾಂಧೀ ಸಮಾಧಿಯನ್ನು ನೋಡಿ ಅಭಿಮಾನದಿಂದ ಬರೆಯುತ್ತಾರೆ.

'ಕರಿಶಿಲೆ ಹಾಸಿದ ನುಣ್ಣಗೆ ಮೇಲೆ
ಶ್ವೇತಾಕ್ಷರಕ್ಕಿದೆ ಮಾಂತ್ರಿಕ ಕಲೆ' (ಚೇತನ ಪುಟ–೮೩)

ಎಂದು ರಾಜಘಾಟಿನ ಪರಿಸರದ ವಿವರ ಕೊಡುತ್ತಾ ಕವನ ಬಿಚ್ಚಿಕೊಳ್ಳುತ್ತದೆ. ಆ ಸಮಾಧಿಯ ಕರಿಶಿಲೆ ಅದರ ಮೇಲೆ ಬಿಳಿಯಕ್ಷರದಲಿ ಕೆತ್ತಿರುವ 'ಹೇ ರಾಮ' ಬರಹ ಆರ್ತಸ್ವರದಿಂದ ಕರೆಯುವಂತೆ ನಿಂತ ನೆಲವೇ ಬಾಯ್ಬಿಡುವಂತೆ ಅನುಭವವಾಗುತ್ತದೆ. ಕವಿಗೆ ಮಾತ್ರವಲ್ಲ ಬೀಸುಗಾಳಿಯ ಭೋರಿಡುವಿಕೆ, ಗರುಡನ ಕೂಜನ ಯಮುನಾ ನದಿಯ ನೀರವತೆಯೂ 'ಹೇ ರಾಮ' ಎನ್ನುವಂತೆ ಕವಿಗನ್ನಿಸುತ್ತದೆ. ಕವನದ ಆದಿಯಲ್ಲಿ ಬರುವ ಇಂತಹ ವಿವರಗಳು ಗಾಂಧಿಯ ಮೇಲಿರುವ ಅಸಾಧಾರಣ ಅಭಿಮಾನದ ಸೂಚನೆಯನ್ನು ನೀಡುತ್ತವೆ.

'ಈಶ್ವರ ಅಲ್ಲಾ ನಿನ್ನಯ ಹೆಸರು; ಸರ್ವರಿಗು ಸನ್ಮತಿ ದಯತೋರು' ಎಂದು ಸೋದರತೆ ಸಾರಿದ ಮಹಾತ್ಮನನ್ನು ನಾವೇ ಕೊಂದದ್ದು, ಭಾರತ, ಪಾಕಿಸ್ತಾನ ವಿಭಾಗ ಬೇಡವೆಂದರೂ ಜನ ಮಹಾತ್ಮನ ಮಾತನ್ನು ಮೀರಿದ್ದು, ಮೊದಲಾದ ಘಟನೆಗಳನ್ನು ಹೆಣೆದಿದ್ದಾರೆ. ಗಾಂಧೀಜಿಯ ಅಮಾನುಷ ಕೊಲೆಯ ಬಗೆಗೆ,

ಹೊಡೆದವೋ ಹೊಡೆತದಲಿ ನೋಯದವನ,
ಕೊಂದೆವೋ ಕೊಲಬಾರದೆಂದವನ
ಸುಟ್ಟೆವೋ ಬೆಂಕಿಯಲಿ ಸುಡುದವನ
ಮರೆತವೋ ನಾವು ಮರೆಯಬಾರದವನ,
ಕಳೆದವಯ್ಯಾ, ಕಳಕೊಳ್ಳಬಾರದವನ;
ಹೇರಾಮ ನಾವೆಂಥ ಪಾಪಿ ಜನ' (ಚೇತನ, ಪುಟ. ೮೩)

ಎಂದು ಹಾಡಿರುವುದು ಅಲ್ಲದೆ ಹೇ ರಾಮ ಎಂದು ಪ್ರತಿ ಪದ್ಯದ ಕೊನೆಯಲ್ಲೂ ಪುನರಾವರ್ತನೆ ಮಾಡಿರುವುದು ದುಃಖವನ್ನು ಇಮ್ಮಡಿಗೊಳಿಸುತ್ತದೆ.

ಹಿರಿಯರಾದ ಸಾ.ಶಿ. ಮರುಳಯ್ಯ ಅವರು ಕೂಡ ತಮ್ಮ **'ಗಾಂಧಿ'** ಎನ್ನುವ ಕವನದಲ್ಲಿ ಗಾಂಧೀಜಿಯವರ ವ್ಯಕ್ತಿ ಹಾಗೂ ವ್ಯಕ್ತಿತ್ವದ ಚಿತ್ರಣವನ್ನು ದಾಖಲಿಸಿದ್ದಾರೆ.

ಇವನೊಬ್ಬ ಬೈರಾಗಿ!
ತುಂಬು ಹರೆಯದ ಮಾಗಿ ಇವನ ದೇಹ!

ಥೇಟು ತಟ್ಟಿಗೆ – ಅಲ್ಲ – ಉಣ್ಣೆಗೊರವನ ಗೂಡು!!
ತಲೆಬೋಳು, ಬಾಯ್‌ಬಚ್ಚು
ಹರಕು ಗಡ್ಡದ ಮೇಲೆ ಮುರುಕು ಮೀಸೆ
ಕಣ್ಣೆರಡು ಮೂಸೆ!
ಸಣ್ಣ ಸೋರೆಯ ಬುರುಡೆಗಂಟಿಸಿದ ರೆಕ್ಕೆ ಗಿವಿ
ಇವನ ಮೈ ಬಳಿದವಗೆ ಸಿಗಬಹುದು ಮಾಂಸ ಒಂದೇ ಕೆ.ಜಿ!
ಹೀರಿದರೆ ಬರಬಹುದು ಕಾಲು ಲೀಟರು ರಕ್ತ
ಆದರೂ ಈತ ಬಹುಶಕ್ತ . . . . . (ಗಾಂಧೀ ಎಂಬುವ ಹೆಸರು, ಪುಟ. ೮೯)

ಎಂದು ಗಾಂಧಿತಾತನ ಬಾಹ್ಯ ವ್ಯಕ್ತಿಗತ ಲಕ್ಷಣಗಳನ್ನು ಚಿತ್ರಿಸುತ್ತಲೇ ಇವನೊಬ್ಬ ಕಾರಣಿಕ, ಆದರೂ ಮೇಲಿಂದ ಇಳಿದು ಬಂದವನಲ್ಲ. ಜನರ ನಡುವೆಯೇ ಬೆಳೆದು ಮೇಲೇರಿದಾತ. ಬೆಳೆದ ಬೆಳೆದೇ ಬೆಳೆದ ಬಾನೆತ್ತರ. ವಿಶ್ವರೂಪಿಯಾದ ಆದರೂ ಅದೇ ಸಜ್ಜನಿಕೆ ಹಮ್ಮು – ಬಿಮ್ಮು ಅಹಂಕಾರಗಳಿಲ್ಲ. ಇವನ ನೆಲೆ ಅರಮನೆಯಲ್ಲ ಇವನ ನೆಲೆ ಗುಡಿಸಲು ಆದರೂ ಋಷಿಯಲ್ಲ ಶೃಂಗಾರಗೊಂಡ ಯತಿ ಎಂದು ಬಣ್ಣಿಸುತ್ತಲೇ ಗಾಂಧೀಜಿ ಅವರ ಸಂಪೂರ್ಣ ವ್ಯಕ್ತಿ – ವ್ಯಕ್ತಿತ್ವದ ಚಿತ್ರಣವನ್ನು ಕವನಶಕ್ತವಾಗಿ ಕಟ್ಟಿಕೊಡುವಂತೆ ಚಿತ್ರಿಸಿದ್ದಾರೆ.

ಸು.ರಂ. ಎಕ್ಕುಂಡಿ ಅವರು ಗಾಂಧೀಯನ್ನು ಕುರಿತು ರಚಿಸಿದ ಕವನ **'ಗಾಂಧೀಜಿ'** ಇಲ್ಲಿ ಎಕ್ಕುಂಡಿ ಅವರು ದಾಸ್ಯದ ಶೃಂಖಲೆ ಕಳಚಿದ ಮಹಾತ್ಮನಿಗೆ ನಮ್ಮಿಂದಾದ ಅಪಾಯವನ್ನು ಬಣ್ಣಿಸುತ್ತದೆ.

ಸರ್ವರನ್ನು ಪ್ರೀತಿಸುವ ಗುಣ ಕಲಿಸಿ ಸಹಬಾಳ್ವೆಯ ಬೀಜ ಬಿತ್ತಿದ ಸಮಾನತೆಯ ಹರಿಕಾರ ಗಾಂಧೀಜಿ ಎನ್ನುವ ಕವಿ ಮನಸ್ಸು ಅವರ ದಾರುಣ ಸಾವಿಗೆ ಮರುಗಿದೆ.

ಹೇ ಭಾರತ ಪುಣ್ಯವ್ರತ
ಧೀಶಕ್ತಿಯ ದೇವವ್ರತ
ಸ್ವಾತಂತ್ರ್ಯದ ಸತ್ಯವ್ರತ
ಗಾಂಧೀಜಿ ಗೆಲ್ಗೆ!
ಬರಬಾರದ್ದೇ ಬಂದಿತು!
ಸೆರೆಬಿಡಿಸಿದ ಕೈ ಕೊಂದಿತು!
ಈ ರಾಷ್ಟ್ರದ ಋಣ ಸಂದಿತು.
ನೆಲಮಂಗಳ ಬಾಳ್ಗೆ (ಗಾಂಧೀ ಎಂಬುವ ಹೆಸರು, ಪುಟ. ೯೭)

ಎಂದು ಅಂತ್ಯವಾಗುತ್ತದೆ ಕವನ. ಭಾರತಾಂಬೆಯ ದಾಸ್ಯ ಬಿಡಿಸಿದ ಗಾಂಧೀಜಿಯನ್ನು ಅವಳ ಮಕ್ಕಳೇ ಕೊಂದರು ಎನ್ನುವ ಕವಿ ಇಂತಹ ಕಾರ್ಯ ಮಾಡಲು ಮನಸ್ಸು ಬಂದಿದ್ದಾದರೂ ಹೇಗೆಂದು ಗರ್ಜಿಸುತ್ತಾರೆ. ಗಾಂಧೀಜಿಯ ಸಾವಿನ ಬಗ್ಗೆ ಬೇಂದ್ರೆಯವರ ಕವಿತೆ ಹೀಗೆ ನುಡಿಯುತ್ತದೆ.

ಗಾಂಧಿ ದೇಹ ಬಿಟ್ಟರಂತೆ
ಜನರು ಅದನು ಸುಟ್ಟರಂತೆ
ಹೌದು ಗಾಂಧಿ ಸತ್ತರಂತೆ
ಜನರು, ನಿಜವೆ, ಅತ್ತರಂತೆ!
ಹೀಗು ಉಂಟು, ಈ ಜಗ, ಕೇಳಿರೋದು ಸೋಜಿಗ!

(ಬೇಂದ್ರೆ ಸಮಗ್ರ ಕಾವ್ಯ –ಪುಟ–೧೦೪)

ಎಂಬ ಈ ಸಾಲುಗಳು **'ಕೇಳಿರೊಂದು ಸೋಜಿಗ'** ಕವಿತೆಯದು. ಮೇಲೊಂದು ಒಳಗೊಂಡು ಇರುವ ಇಮ್ಮುಖವಾದ ಸಮಾಜದ ಸೋಗಲಾಡಿತನವನ್ನು ಮೊನಚಾಗಿ ಚುಚ್ಚಿದ್ದಾರೆ ಕವಿ.

ಗಾಂಧೀ ಜಯಂತಿ ದಿನ ಸತ್ಯವನ್ನಾಡೋಣ
ಸುಳ್ಳಿಗೋ ಇಡಿ ವರುಷ ತೆರವಿಹುದು (ಬೇಂದ್ರೆ ಸಮಗ್ರ ಕಾವ್ಯ –ಪುಟ–೧೦೪)

ಎಂದಾರಂಭವಾಗುವ **'ದರಿದ್ರ ನಾರಾಯಣ'** ಕವನ ಇಂತಹುದೇ ಮತ್ತೊಂದು ನಿದರ್ಶನ.

ಪೂರ್ಣದೃಷ್ಟಿಯಿಂದ ಗಮನಿಸಿದಾಗ ಗಾಂಧೀಜಿಯ ವ್ಯಕ್ತಿತ್ವ ಭಾರತೀಯ ಆಧ್ಯಾತ್ಮಿಕ ಶಕ್ತಿಯ ಸಾರಭೂತ ಪ್ರತಿರೂಪವೆಂಬಂತೆ ಕುವೆಂಪು ಅವರ ಅಭಿಮತ. ಭಗವಂತನು ಕಳುಹಿಸಿದ್ದ ಅನಭಿಷಿಕ್ತ ದೇವದೂತ, ನಮ್ಮ ಸ್ವಾತಂತ್ರ್ಯ ಶಿಲ್ಪಿ. ಇಹರಂಗದಿಂದ ಕಣ್ಮರೆಯಾದನು, ಸಮಗ್ರ ರಾಷ್ಟ್ರವೇ ಸ್ವಾತಂತ್ರ್ಯೋದಯದ ಉತ್ಸವವನ್ನು ಆಚರಿಸುವ ಉತ್ಸಾಹದಲ್ಲಿ ಮೈಮರೆತಿದ್ದಾಗ, ವ್ಯಥೆಯ ಬೀಡಾಗಿದ್ದ ಗಡಿನಾಡಿನಲ್ಲಿ ಗಾಂಧೀಜಿ ಶಾಂತಿ ಮತ್ತು ತಾಳ್ಮೆಯಿಂದ ನಡೆದುಕೊಳ್ಳಬೇಕೆಂದು ಹಿತವಚನವನ್ನೀಯುತ್ತ ಇದ್ದರು. ಈ ಶಾಂತಿದೂತ ಮಹಾಕವಿ ಕುವೆಂಪು ಅವರ **"ಸ್ವಾತಂತ್ರ್ಯಶಿಲ್ಪಿ"**ಎಂಬ ಕವನ ರಚನೆಗೆ ಪ್ರೇರಣೆಯಾಗುತ್ತಾರೆ.

ಮರೆವುದೆಂತಾ ನಮ್ಮ ಸ್ವಾತಂತ್ರ್ಯಶಿಲ್ಪಿಯಂ
ದಿವ್ಯದಿನದೀ ಶುಭ ಮುಹೂರ್ತದಲ್ಲಿ?
ಮರೆವುದೆಂತಯ್ ಭುವನ ಗೌರವ ಮಹಾತ್ಮನಂ
ಸ್ವಾತಂತ್ರ್ಯದೀ ಸುಪ್ರಭಾತದಲ್ಲಿ?
ಹೆಜ್ಜೆ ಹೆಜ್ಜೆಯ ನಿಡಿಸಿ ಕೈ ಹಿಡಿದು ನಡೆನಲಿಸಿ

ಬಿಡುಗಡೆಗೆ ತಂದ ಆ ತಂದೆಯೆಲ್ಲಿ?
ಎಲ್ಲಿ ? ಓ ಅವನೆಲ್ಲಿ? ನಿಚ್ಚವೂ ನಮ್ಮೆದೆಯ
ನಂಜೀಂಬುವಾ ನೀಲಕಂಠನೆಲ್ಲಿ? (ಬಾಪು.ಕಾವ್ಯಾಂಜಲಿ., ಪುಟ. ೪೬)

ಸ್ವಾತಂತ್ರ್ಯೋತ್ಸವದ ಶುಭ ಮುಹೂರ್ತದಲ್ಲಿ ಅಧಿಕಾರಪ್ರಿಯ ನಾಯಕರು. ಸ್ವಾತಂತ್ರ್ಯಶಿಲ್ಪಿಯನ್ನು ಮರೆಯಬಹುದು : ಭುವನ ಗೌರವ ಮಹಾತ್ಮನನ್ನು ಕವಿ ಮರೆಯುತ್ತಾರಯೇ ಇಲ್ಲ. ಗಾಂಧೀಯವರು ಕುವೆಂಪು ಕಾವ್ಯದೊಳಗೆ ಅಂತರ್ಮುಖಿಯಾಗಿದ್ದರೂ ಎಂಬುದಕ್ಕೆ ಇದಕ್ಕಿಂತ ಬೇರೊಂದು ಜ್ವಲಂತ ನಿದರ್ಶನ ಬೇಕಿಲ್ಲವೆನಿಸುತ್ತದೆ. ಗಾಂಧೀಜಿಯವರು ಮಡಿದ ಮೇಲೆ ಸ್ವಾತಂತ್ರ್ಯೋತ್ತರ ಭಾರತಕ್ಕೆ ಅವರ ಅವಶ್ಯಕತೆಯನ್ನು ಕುರಿತು ಹಿರಿಯ ಏಕವಿಗಳಾದ ಗೋವಿಂದ ಪೈ "ಇನ್ನಿನಿಸು ನೀ ಮಹಾತ್ಮ ಬದುಕಬೇಕಿತ್ತು ! " ಕವನದಲ್ಲಿ ಹೀಗೆ ಹೇಳಿರುವರು.

"ಇನ್ನಿನಿಸು ನೀ ಮಹಾತ್ಮ ಬದುಕಬೇಕಿತ್ತು!
ಈಗ ಭಾರತಕತ್ಯಗತ್ಯವಿದೆ ನಿನ್ನ;
ಬಿರುಗಾಳಿಲೊಲೆಗವ ಹಡಗಂತಿಹುವದದಾಸತ್ತು
ನಿನ್ನ ಹೊರತಾರೊಯ್ಯೆ ರೇವಿನೊಳದನ್ನ?
(ಹಾ.ಮಾ. ನಾಯಕ (ಸಂ.), ಗೋವಿಂದ ಪೈ, ಪುಟ. ೧೬).

ಸ್ವಾತಂತ್ರ್ಯೋತ್ತರ ಭಾರತವು ಹಲವಾರು ಸಮಸ್ಯೆಗಳಿಗೆ ಸಿಕ್ಕು ಜರ್ಜರಿತವಾಗಿ ಬಿರುಗಾಳಿಗೆ ಸಿಕ್ಕ ಹಡಗಿನಂತಾಗಿದೆ. ಈ ಹಡಗನ್ನು ಗಾಂಧೀಜಿಯನ್ನು ಬಿಟ್ಟು ಬೇರೆ ಯಾರೇ ಬಂದರಿಗೆ ತಲುಪಿಸಲು ಸಾಧ್ಯ? ಅದಕ್ಕಾಗಿ ಸ್ವತಂತ್ರಗೊಂಡ ಭಾರತವನ್ನು ಮುನ್ನಡೆಸಿಕೊಂಡು ಹೋಗಲು ಗಾಂಧೀಜಿ ಇನ್ನಷ್ಟು ದಿನ ಬದುಕಬೇಕಾಗಿತ್ತೆಂದು ಅಪೇಕ್ಷಿಸಿರುವರು.ಕೊನೆಗೆ ಅನಂತತೆಯಲ್ಲಿ ಲೀನವಾದರು. ಗಾಂಧೀಜಿಯವರು ಮಡಿದಾಗ ರಂ ಶ್ರೀ ಮುಗಳಿ ಅವರು ಗಾಂಧೀಯವರನ್ನು ತಮ್ಮ **"ಮಾನವ ದೇವ" ಕವನದಲ್ಲಿ** ಹೀಗೆ ಕೇಳಿಕೊಂಡಿರುವರು :

"ಸಾವಿಗೆ ಬೆದರಿ ಹೆಂಬೇಡಿಗಳಾದ ನಿನ್ನ ನಾಡಿಗರಿಗೆ
ನಿನ್ನಂಥ ಬಾಳನ್ನು ನಿನ್ನಂಥ ಸಾವನ್ನು ಕರುಣಿಸಯ್ಯ
ಮತ್ಸ್ಯದಲ್ಲಿ ಅಮೃತರಸಧಾರೆಯ ಹರಿಯಿಸಯ್ಯ"
(ರಂ.ಶ್ರೀ ಮುಗಳಿ, ಅಪಾರ ಕರುಣೆ, ಪುಟ. ೭೯.)

ಎಂದು ಪ್ರಾರ್ಥಿಸಿಕೊಂಡಿರುವರು. ಗಾಂಧೀಜಿಯವರು ಮಡಿದಾಗ ನಾಡಿಗೆ ನಾಡೇ ದುಃಖದಲ್ಲಿ ಮುಳುಗಿತು. ಅವರ ಮೃತ ದೇಹವನ್ನು 'ಚಂದನ'ದ ಚಿತೆಯಲ್ಲೂ ಅಗ್ನಿಗೆ ಅರ್ಪಿಸಿ ಚಿತಾಭಸ್ಮವನ್ನು ಪುಣ್ಯನದಿಗಳಲ್ಲಿ ಅರ್ಪಿಸಿದೆವು : ಏನೆಲ್ಲ ಮಾಡಿದೆವು. ಆದರೂ ಗಾಂಧೀಜಿಯವರು ಮಡಿದ ನಂತರ ದೇಶದಲ್ಲಿ ಅವರ ಹೆಸರಿನಲ್ಲಿ ಏನೆಲ್ಲಾ ನಡೆಯುತ್ತಿರುವುದನ್ನು –

"ನಿನ್ನ ದೇಹವನಗ್ನಿಗೆ ಕೊಟ್ಟು ಮರುಚರಣದಿಂದ
ನಿನ್ನ ತತ್ತ್ವವದು ಸುಡುವಂತೆ ಕೋಪತಾಪದಲಿ"

(ರಂ.ಶ್ರೀ ಮುಗಳಿ, ಅಪಾರ ಕರುಣೆ, ಪುಟ. ೭೯).

– ಮೋಸ, ಸುಲಿಗೆ, ಮೇಲು, ಕೀಳು, ಅಧಿಕಾರ, ಮದ – ಹಿಂಸೆ – ಮುಂತಾದವುಗಳಿಂದ ಜನತೆಯ ಮೇಲೆ ಅಗ್ನಿ ಪ್ರಳಯವನ್ನು ನಡೆಸಿದೆವು. ಅಲ್ಲದೆ ಗಾಂಧೀಜಿಯವರ ಹೆಸರಿನಲ್ಲಿ –

"ಊರುಗಳ ಗುಡಿ – ಗುಂಡಾರಗಳ ಕಟ್ಟಿ
ಗಾಂಧಿ ದೇಶವಿದು ಎಂಬ ಆಭಾಸವನು ಹುಟ್ಟಿಸುವೆವು
ನಿನ್ನ ಸ್ಮಾರಕವು ನಿನ್ನ ಮಾರಕವಾಗುವಂತೆ"

(ರಂ.ಶ್ರೀ ಮುಗಳಿ, ಅಪಾರ ಕರುಣೆ, ಪುಟ. ೭೯).

– ಮಾಡಿ ಈ ನಾಡನ್ನು ನರಕವನ್ನಾಗಿ ಮಾಡಿದ್ದೇವೆ. ಅದಕ್ಕಾಗಿ ನಾಡನ್ನು ಸ್ವರ್ಗವನ್ನಾಗಿ ಮಾಡಲು ಒಂದೆಂಬ ಭಾವನೆ ಬೆಸೆಯಲು ಭವ್ಯ – ದಿವ್ಯ ರಾಷ್ಟ್ರವನು ಕಟ್ಟಲು ಈ ಜನರಲ್ಲಿ ಸುಖ – ಶಾಂತಿ, ನಾಡಿನ ಒಲುವೆ, ಜನದ ಒಲುಮೆ, ನೆಲೆಗೊಳ್ಳುವವರೆಗೂ "ನೀ ಕಣ್ಗೆ ಕಾಣದ ರೂಪಿನಲಿ ಬಂದು ನಿಂದು ನಿನ್ನಮರ ಸಂದೇಶವನು ಬೀರು, ಸತ್ಪಥವ ತೋರು" ಎಂದು ಪ್ರಾರ್ಥಿಸಿಕೊಂಡಿರುವರು

**'ಗಾಂಧಿ ೧೦೦ ರ ಹಬ್ಬ'** ಕವನವು ಗಾಂಧೀಜಿಯವರ ೧೦೦ನೇ ಹುಟ್ಟುಹಬ್ಬದ ಶುಭ ಸಂದರ್ಭದಲ್ಲಿ ರಚಿಸಲಾಗಿದೆ. ಇದರಲ್ಲಿ ಇವರ ವ್ಯಕ್ತಿತ್ವವನ್ನು 'ಬುದ್ಧ', ಯೇಸುಕ್ರಿಸ್ತನಿಗೆ ಹೋಲಿಸಲಾಗಿದೆ. ಬ್ರಿಟೀಷರ ತಂತ್ರಕ್ಕೆ ಪ್ರತಿತಂತ್ರವಾಗಿ ಸತ್ಯಾಗ್ರಹ ಹೂಡಿದರು. ಇಂಥವರನ್ನು ಕೊಲ್ಲಲಿಕೆ ವೈರಿಗಳಿಗೆ ನಾಚಿಕೆಯಾಗಿ ನಮ್ಮ ದೇಶವನ್ನು ನಮಗೆ ಬಿಟ್ಟುಕೊಟ್ಟು ಬಂದ ದಾರಿ ಹಿಡಿದು ಮರಳಿ ಹೋದರು. ಇದು ಗಾಂಧಿ ೧೦೦ರ ಹುಟ್ಟುಹಬ್ಬದಲಿ ಅವರ ನೆನಪು ಮಾತ್ರ ಉಳಿದಿದೆ. ಅವರ ತತ್ತ್ವ ಆದರ್ಶಗಳಿಗೆ ತಿಲಾಂಜಲಿ ಇಡಲಾಗಿದೆ. ನಡೆಗೂ – ನುಡಿಗೂ ಅಂತರವಾಗಿದೆ. ಜಗತ್ತು ಇದನ್ನು ಕಂಡು ಅಪಹಾಸ್ಯ ಮಾಡಿ ನಗುವಂತಾಗಿದೆ ನಮ್ಮ ದೇಶದ ಸ್ಥಿತಿ. ಈ ನಾಡಿನಲ್ಲಿ –

"ಓ ಗಾಂಧೀ, ಇಂದು
ನೀವು ಹುಟ್ಟಿದ್ದು ಬೆಳೆದದ್ದು, ಬದುಕಿದ್ದು ಸತ್ತದ್ದು
ವ್ಯರ್ಥವಾಯ್ತೆನಿಸುವಂತಿರುವಂದು"

(ವಿ. ಸೀತಾರಾಮಯ್ಯ, ಸ್ನೇಹ – ವಿಶ್ವಾಸ (ಸಮಗ್ರ ಕಾವ್ಯ ಸಂಪುಟ), ಪುಟ. ೩೩೪)

ಎಂದು ಕವಿ ವ್ಯಥೆಪಟ್ಟಿರುವರು. ಆದರೆ ಇಂದು ಮತ್ತೆ ಜನತೆಯ ಬಾಯಾರಿದೆ; ನಿನ್ನ ನೀರಿಗಾಗಿ ಹಪಹಪಿಸುತ್ತಿದ್ದಾರೆ. ಕ್ಷಣ ಕ್ಷಣಕ್ಕೂ ಜನತೆ ಕೆಡುತ್ತಿದ್ದಾರೆ. ಇದನ್ನು ಪರಿಹರಿಸುಲು ಈಗಲೇ ಹೊಸಮಳೆ ಬರಬೇಕು, ಅಂದರೆ ಗಾಂಧೀಜಿಯವರು ಇನ್ನೊಮ್ಮೆ ಹುಟ್ಟಿಬರಲು ಕವಿ ಈ ರೀತಿ ಕೇಳಿಕೊಂಡಿದ್ದಾರೆ.

"ಸಿಡಿಲಾಗಿ ಬರಬೇಕು ಗುಡುಸಾಗಿ ಬರಬೇಕು
ಮಿಂಚಿಮಳೆಗರೆಯಲೇ ಬೇಕು
ಅವತಾರವಾಗದೆ ಉದ್ಧಾರವೆಂತಯ್ಯ
ಬಾ ತಂದೆ ಬೇಗ ಬಾರಯ್ಯ"

(ಎಸ್.ವಿ. ಪರಮೇಶ್ವರ ಭಟ್ಟ, ಕೃಷ್ಣ ಮೇಘ, ಪುಟ. ೨೦.)

ಹೀಗೆ ಲೋಕವನ್ನು ಉದ್ಧರಿಸಲು ಹುಟ್ಟಿ ಬರಲು ಕೇಳಿಕೊಂಡಿರುವರು. ಒಂದು ವೇಳೆ ಇದಕ್ಕಾಗಿ ಹುಟ್ಟಿ ಬರದಿದ್ದರೂ ನೀನು ಹುಟ್ಟಿ ಬಂದೇ ಬರುತ್ತೀ – ಎಂದು ನಾನು ಭಾವುಕನಾಗಿ ನಂಬಿರುವ ತನಗಾದರೂ ಹುಟ್ಟಿಬರಬೇಕೆಂದು ಕವಿ ಕೇಳಕೊಂಡಿರುವರು.

ಹೀಗೆ ಲೋಕವನ್ನು ಉದ್ಧರಿಸಲು ಹುಟ್ಟಿ ಬರಲು ಕೇಳಿಕೊಂಡಿರುವರು. ಒಂದು ವೇಳೆ ಇದಕ್ಕಾಗಿ ಹುಟ್ಟಿ ಬರದಿದ್ದರೂ ನೀನು ಹುಟ್ಟಿ ಬಂದೇ ಬರುತ್ತೀ – ಎಂದು ನಾನು ಭಾವುಕನಾಗಿ ನಂಬಿರುವ ತನಗಾದರೂ ಹುಟ್ಟಿ ಬರಬೇಕೆಂದು ಕವಿ ಕೇಳಿಕೊಂಡಿರುವರು.

ಸಿದ್ಧಯ್ಯ ಪುರಾಣಿಕರು (ಮಾನಸ ಸರೋವರದ ಸಂಕಲನದ) **'ಕೋವಿಯ ಕೋರಿಕೆ'** ಕವನದಲ್ಲಿ ಗಾಂಧೀಜಿಯವರ ಸಾವಿಗೆ ಕಾರಣವಾದ ಕೋವಿಯು ಜನಿಸಿದ ಮುಹೂರ್ತವೇ ಸರಿ ಇಲ್ಲ. ಅಂತೆಯೇ ಅದು ಇಂತಹ ಹೇಯ ಪಾಪದ ಕ್ರೂರ ಕಾರ್ಯವನ್ನೆಸಗಿದೆ ಎಂದು ವ್ಯಥೆಪಟ್ಟಿದ್ದರು.

ಜಗತ್ತಿನ ಕೋಟಿ ಕೋಟಿ ಕೋವಿಗಳಲ್ಲಿ ಈ ಕೋವಿ ಇಂಥ ಹೀನ ಕೃತ್ಯವೆಸಗಲು ಕಾರಣವಾಯಿತು. ಇದು ನನ್ನ ಪಾಲಿಗೆ ಕೇಡು ತಂದಿತು. ಈ ದೃಷ್ಕೃತ್ಯವೆಸಗಿದ ಗೋಡ್ಸೆಗೆ ಕವಿ –

"ಎಲೊ ಪಾಪಿಯೆ ಗೋಸದೆ
ಈ ಕೃತ್ಯ ಮಾಡಿಸೆ
ನನ್ನನಂದು ಕೊಂದೆಯಾ
ನನ್ನ ನಾಡ ತಂದೆಯಾ"

(ಡಾ. ಹೊ. ಶ್ರೀನಿವಾಸಯ್ಯ, ಸಾಹಿತ್ಯ ಲೋಕದಲ್ಲಿ ಮಹಾತ್ಮಗಾಂಧಿ, ಪುಟ. ೫೬.)

ಎಂದು ಕೋಪಿಸಿಕೊಂಡಿರುವರು. ಕವಿಗೆ ಗಾಂಧೀಜಿಯವರನ್ನು ಕೊಂದುದು ತನ್ನನ್ನೇ ಕೊಂದಂತೆ, ಅದು ತನ್ನ ಕೇಡೆಂದೇ ಬಗೆದು "ನನಗೆ ಕುಂದು ತಂದೆಯಾ' – ಎಂದಿರುವರು.

ಅಲ್ಲದೆ ಗೋಡ್ಸೆಗೆ ಗಾಂಧೀಜಿಯವರು 'ನಿನ್ನ ನಾಡ ತಂದೆ' – ಎಂದು ವೈರಿಯಲ್ಲೂ ಗಾಂಧೀಜಿಯವರ ಬಗ್ಗೆ ಗೌರವ ಭಾವನೆ ಕಂಡಿರುವರು.

ಇಂದು ಈ ನಾಡಿನ ವ್ಯವಸ್ಥೆ ಅಸ್ಥವ್ಯಸ್ತವಾಗಿದೆ. ಈ ದೇಶವನ್ನು ಸುಗಮವಾಗಿ ನಡೆಸಿಕೊಂಡು ಹೋಗಲು ಇಂದು ಗಾಂಧೀಜಿಯವರ ಅವಶ್ಯಕತೆ ಇರುವುದನ್ನು **"ಗಾಂಧೀಜಿಯವರ ಪಾದಕ್ಕೆ "** ಕವನದಲ್ಲಿ ಹೀಗೆ ಹೇಳಿರುವರು :

"ಕಂಬನಿಯ ಆರ್ಘ್ಯದಲಿ ನಾಡೆಲ್ಲ ತಲೆಬಾಗಿ
ಕಲ್ಲಾಯ್ತು ; ಸದ್ಗತಿಯ ತೋರು, ತಂದೆ !
ಕಡಲು, ಕತ್ತಲೆ, ಹಡಗು ಒಡೆದೀತು ! – ಬೆಳಕಾಗಿ
ಭಾರತವ ಕೈ ಹಿಡಿದು ನಡೆಸು ಬಾ, ತಂದೆ!"

(ಕೆ.ಎಸ್. ನರಸಿಂಹಸ್ವಾಮಿ : ಮಲ್ಲಿಗೆಯ ಮಾಲೆ, ಪುಟ. ೧೯೬.)

ಗಾಂಧೀಜಿಯವರು ಮಡಿದುದಕ್ಕಾಗಿ, ಇಲ್ಲದ್ದಕ್ಕಾಗಿ ಈ ನಾಡು ದುಃಖದಲ್ಲಿ ಮುಳುಗಿತು. ಮತ್ತೆ ಅಜ್ಞಾನ – ಅಂಧಕಾರ ಕವಿದಿದೆ. ದೇಶವೆಂಬ ಈ ಹಡಗು ಚಲಿಸುವ ಕಡಲಿನ ಮಾರ್ಗದಲ್ಲಿ ಕತ್ತಲೆ ಕವಿದಿದೆ. ಅಲ್ಲದೆ ಈ ಹಡಗು ಒಡೆದೀತೆಂಬ ಭಯ ಭ್ರಾಂತಿಯೂ ಇದೆ. ಅದಕ್ಕಾಗಿ ಕವಿಯು ಗಾಂಧೀಜಿಯವರಿಗೆ ಇನ್ನೊಮ್ಮೆ ಹುಟ್ಟಿ ಬಂದು ಬೆಳಕನ್ನು ತೋರಿ, ಈ ದೇಶವನ್ನು ನಡೆಸಲು ಕೇಳಿಕೊಂಡಿರುವರು.

ಜಿ.ಎಸ್. ಶಿವರುದ್ರಪ್ಪ ಅವರು **'ಗಾಂಧಿ'** ಕವನದಲ್ಲಿ ಇಂದಿನ ಕಾಲದಲ್ಲಿ ವಿಚಿತ್ರವೆನಿಸಿದ, ವಿಲಕ್ಷಣ ವ್ಯಕ್ತಿತ್ವವನ್ನು ಇಂದಿನ ಮೌಲ್ಯ ಆದರ್ಶಗಳೊಂದಿಗೆ ತುಲನಾತ್ಮವಕಾಗಿ ನೋಡಿರುವರು. ಇದು ವ್ಯವಹಾರಿಕ ಜಗತ್ತು, ಎಲ್ಲದಕ್ಕೂ ಲಾಭ – ನಷ್ಟ ಲೆಕ್ಕ ಹಾಕಿ ಬದುಕುವ ಕಾಲ. ಇಂಥ ಕಾಲದಲ್ಲಿ ಗಾಂಧೀಜಿಯೊಬ್ಬ ವಿಚಿತ್ರ ಮನುಷ್ಯನಾಗಿ ಎಲ್ಲಿಂದ ಬಂದನೋ ಏನೋ, ಬಂದು ಬೆಲೆಕಟ್ಟಲು ಬಾರದ ಈ ಜನತೆಯ ಮುಂದೆ ತನ್ನದೊಂದು ಅಂಗಡಿ ತೆರೆದು ಎಲ್ಲಾ ಹರಾಜಿಗಿಟ್ಟನೆಂದು ವಿಡಂಬನಾತ್ಮಕವಾಗಿ ವಿನೋದವಾಗಿ ಗಾಂಧೀಜಿಯವರ ವಿಶೇಷ ವ್ಯಕ್ತಿತ್ವದ ವಿವರಣೆಗೆ ಪೀಠಿಕೆ ಹಾಕಿರುವರು.

ಇಂದು ಯಾವುದನ್ನು ಮಾಡಿದರೆ ಶ್ರೇಷ್ಠ ವ್ಯಕ್ತಿಯೆನ್ನುತ್ತಾರೆಯೋ ಗಾಂಧೀಜಿ ಅದನ್ನು ಮಾಡದೆ, ಶ್ರೇಷ್ಠತೆಯ ಮಾನದಂಡಗಳಾವವೋ ಅವು ಇರದೆ, ಅದಕ್ಕಿಂತಲೂ ಶ್ರೇಷ್ಠ ವ್ಯಕ್ತಿಯಾಗಿರುವರೆಂಬುದನ್ನು ಹೀಗೆ ವರ್ಣಿಸಿರುವರು :

"ಕಾವಿಯುಡಲಿಲ್ಲ, ಹೆಣ್ಣ ಬಿಡಲಿಲ್ಲ
ಎಲ್ಲೋ ಮಠದೊಳಗೆ ಕೂತು ರಹಸ್ಯವಾಗಿ
ಆಪಮಣಿ ಎಣಿಸಿ ಸಮಾಧಿಸ್ಥನಾಗಲಿಲ್ಲ"

(ಜಿ.ಎಸ್. ಶಿವರುದ್ರಪ್ಪ : ಸಮಗ್ರ ಕಾವ್ಯ, ಪುಟ. ೩೮೫).

ಅಲ್ಲದೆ ಪವಾಡಗಳನ್ನು ಮಾಡಲಿಲ್ಲ, ಜನಸಾಮಾನ್ಯರೊಂದಿಗೆ ಅವರಂತೆ ಪ್ರಾರ್ಥಿಸಿರುವರು ಆದರೂ ಶ್ರೇಷ್ಠ ಸಂತ, ಫಕೀರನೆಂದು ಬಗೆಯಲಾಯಿತು. ಕತ್ತಿ – ಕೋವಿ ಹಿಡಿಯಲಿಲ್ಲ ಆದರೂ ಅಹಿಂಸಾ ಅಸ್ತ್ರದಿಂದ ಯುದ್ಧ ಮಾಡಿದರು. ಏಕಾಂಗಿಯಾದರೂ ಜನಗಣಮನದ ಅಧಿನಾಯಕರಾದರು. ದೇಶವನ್ನು ಬಿಡುಗಡೆಗೊಳಿಸಲು ಶ್ರಮಿಸಿ ಬಳಲಿದ್ದಕ್ಕೆ ಹಂತಕರ ಗುಂಡಿಗೆ ಬಲಿಯಾದುದೇ ಅವರಿಗೆ ವಿಶ್ರಾಂತಿಯಾಯಿತೆಂಬಂತೆ – "ಸಿಡಿಗುಂಡುಗಳ ಹಾಸಿಗೆಯ ಮೇಲೆ ನಿನಗೆ ತಣ್ಣನೆ ನಿದ್ದೆ" – ಎಂದು ಬಣ್ಣಿಸಿರುವರು. ಗಾಂಧೀಜಿಯವರು ಮಡಿದ ಮೇಲೆ ಈ ನಾಡು ಮತ್ತೆ ಜಡನಿದ್ದೆಯಲ್ಲಿ ಮುಳುಗಿತೆಂಬದುನನು "ನಮಗೂ ನಿದ್ದೆ ಒಮ್ಮೊಮ್ಮೆ ಎಚ್ಚರ" ಎಂದಿರುವರು. ಒಮ್ಮೊಮ್ಮೆ ಎಚ್ಚರವಾದಾಗಲೇ ಈ ನಾಡಿನಲ್ಲಿ ಗಾಂಧೀಜಿ ಹೋದ ಮೇಲೂ ಅವರ ತತ್ತ್ವ ಆದರ್ಶಗಳು ಸಿದ್ಧಾಂತಗಳಿಗೆ ಯಾವ ರೀತಿ ತಿಲಾಂಜಲಿ ಇಡಲಾಗಿದೆ ಎಂಬುದನ್ನು ಮಾರ್ಮಿಕವಾಗಿ ಹೇಳಿರುವರು.

ದೈವತ್ವಕ್ಕೇರುವ ಮಣ್ಣಿನ ಮಗನ ಈ ಕಲ್ಪನೆ ಗೋಪಾಲಕೃಷ್ಣ ಅಡಿಗರ **'ಭಾರತದ ತಂದೆ ಗಾಂಧಿ'** ಎಂಬ ಕವನದ ಆರಂಭದ ಸಾಲುಗಳಲ್ಲಿ ಅಭಿವ್ಯಕ್ತಗೊಂಡಿದೆ :

"ಯಾವ ಬಿತ್ತೋ ನಾನು ಅದೇ
ಇದೇ ನೆಲದ ಬಸಿರಲಿ
ಬಾನೆತ್ತರ ಬೆಳೆವಂದವ
ಆ ಚೆಂದವ, ಬಿಸವಂದವ
ನಿನ್ನೊಳಣ್ಣ ಕಂಡೆನು" (ಬಾಪು ಕಾವ್ಯಾಂಜಲಿ, ಪುಟ. ೬)

ಗಿರಡ್ಡಿ ಗೋವಿಂದರಾಜರು ಇದನ್ನೇ ಅಡಕವಾಗಿ ಹೇಳುತ್ತಾರೆ : ಈ ಭೂಮಿಯಲ್ಲಿ ಈ ಜೀವನದಲ್ಲಿ ಅವರು ದೈವಿಕತೆಯ ಕನಸು ಕಂಡರು. 'ಸುಜನಾ' ಅವರು **'ಗಾಂಧಿ'** ಎಂಬ ಕವನದಲ್ಲಿ ತಮ್ಮದೇ ಆದ ರೀತಿಯಲ್ಲಿ ಇದನ್ನು ವರ್ಣಿಸಿದ್ದಾರೆ.

"ಈ ಹಿಮಾಲಯ ಕಲ್ಪವೃಕ್ಷಕ್ಕೆ
ಮೇಲೆಷ್ಟೊ
ಅದಕ್ಕೂ ಸರಿ ಮಿಗಿಲು ಬೇರುಂಟು ಕೆಳಗೆ
ದೇವರ ಮೊಗಕ್ಕೆ ಮೊಗವಿಟ್ಟು ನೋಡಿದ ನೆಲದ ಮಗ"

(ಗಾಂಧಿ ಎಂಬುವ ಹೆಸರು, ಪುಟ. ೭೮)

ಗಾಂಧೀಜಿ ಮತ್ತು ಬುದ್ಧ, ಕ್ರಿಸ್ತ ಹಾಗೂ ಸಾಕ್ರಟೀಸ್‌ರ ಈ ಮಹಾ ವ್ಯಕ್ತಿಗಳಲ್ಲಿ ಕಂಡುಬರುವ ಸಾಮ್ಯದ ವಿಚಾರವನ್ನು ಅನೇಕ ಕನ್ನಡ ಕವಿಗಳು ಒತ್ತಿ ಹೇಳಿದ್ದಾರೆ. ವಿ. ಸೀತರಾಮಯ್ಯನವರು **'ಕೈ ಮುಗಿವ ಗಾಂಧಿ'** ಎಂಬ ಕವನದಲ್ಲಿ ಹೀಗೆ ಹೇಳುತ್ತಾರೆ.

"ನೂರಾರು ವರ್ಷಕ್ಕೆ, ಸಾವಿರಕ್ಕೆ, ಎರಡಕ್ಕೆ
ಅಲ್ಲಿ ಯೇಸುಕ್ರಿಸ್ತ, ಇಲ್ಲೆಮ್ಮ ಸಿದ್ಧಾರ್ಥ
ಆದಿಜಿನಪುತ್ರ ಸುಭ್ರಾತೃ ಬಾಹುಬಲಿಯಂತೆ
ಭೂಮಿಗತಿಶಯದಂತೆ
ಸಗ್ಗದಿದಿರೆಂಬಂತೆ
ಒಲವನೊಲವಿಗೆ ನೀವು ತಿರುಗಿಸಿದಿರಿ
ಕ್ಷಮೆಗೆ ಹಿರಿತ್ಯಾಗಕ್ಕೆ ತೇದಿರೊಡಲ" (ಬಾಪೂ ಕಾವ್ಯಾಂಜಲಿ, ಪುಟ. ೧೧೪)

ಜೀವಿ ಕುಲಕರ್ಣಿ ಗಾಂಧೀಜಿಯವರನ್ನು ಕುರಿತು **'ಗಾಂಧೀಜಿ'** ಕವಿತೆಯಲ್ಲಿ ಹೀಗೆ ವರ್ಣಿಸಿರುವುದು ಆಕರ್ಷಕವಾಗಿದೆ.

"ಹಿಂದಕ್ಕೆ ಬುದ್ಧ ಮಾಡಿದ ಕಾರ್ಯ
ಕ್ರಿಸ್ತ ಮಾಡಿದ ಕಾರ್ಯ –
ಮತ್ತೆ ನಡೆಸಿದನೊಬ್ಬ ಭರತ ಭೂಮಿಯಲಿ ............
ಮೃಣ್ಮಯ ದೇಹದಲಿ
ಚಿನ್ಮಯ ದೀಪವನು ಹೊತ್ತಿಸಿದ ಅವತಾರಿ!
ಅವರೇ .............. ಗಾಂಧೀಜಿ"

(ಗಾಂಧಿ ಎಂಬುವ ಹೆಸರು, ಪುಟ. ೧೦೧)

ಗಾಂಧೀಜಿಯ ದಾರಿ ಆದರ್ಶದ ದಾರಿ. ಹಿಂಸೆಯನು ಗೆಲ್ಲಲಿಕ್ಕೆ ಅಹಿಂಸೆಯೇ ಅಸ್ತ್ರ; ದ್ವೇಷವನ್ನು ತೊಲಗಿಸಲು ಪ್ರೀತಿಯೇ ಶಸ್ತ್ರ! ದರ್ಪವನು ತೊಲಗಿಸಲು ಸತ್ಯಾಗ್ರಹದ ಮಂತ್ರ.

ಎಲ್ಲರಿಗೂ ಗೊತ್ತು ಗಾಂಧಿ. ಆದರೆ ಎಷ್ಟು ಜನಕ್ಕೆ ಗೊತ್ತು ಗಾಂಧಿಯ ಅಂತರಂಗ? ಗಾಂಧೀಜಿಯಲ್ಲಿ 'ರೂಸೋ'ನ ಇತ್ಯಾತ್ಮಕ ಅಂಶವೂ ಇತ್ತು. ಅದು ಮರಳಿ ಪ್ರಕೃತಿಗೆ ಹೋಗುವ ಅನನ್ಯವಾದ ಸಹಜವಾದವಾಗಿತ್ತು! ಗಾಂಧೀಜಿಯಲ್ಲಿ ಇರಲಿಲ್ಲವೇನು? ಲೆನ್ನಿನ್ನು? ಮಾರ್ಕ್ಸ್? ಇಬ್ಬರನ್ನೂ ಕಾಣಬಹುದಾಗಿತ್ತು. ಅವರ ಕ್ರಾಂತಿವಾದದಲ್ಲಿ! ಗಾಂಧೀಜಿಯಲ್ಲಿ ಒಬ್ಬ ನೀಟ್ಸೆಯೂ ಇದ್ದ. ಗಾಂಧೀಜಿಯ ಅತಿ ಮಾನವತಾವಾದವೆಲ್ಲಾ ಇವನು ಕೊಟ್ಟಿದ್ದೇ! ಆದರೆ ಗಾಂಧೀಜಿ ಎಲ್ಲರಿಗಿಂತ ದೊಡ್ಡವರಾದದ್ದು ತಮ್ಮ ಅಹಿಂಸಾವಾದದಿಂದ!

ಗಾಂಧಿ ತಕಲಿ ಹಿಡಿದರೂ ಅವರು ಹಿಂಜಿದ್ದು ಕೇವಲ ಹತ್ತಿಯ ಹಿಂಜಿಯನ್ನಷ್ಟೇ ಅಲ್ಲ. ಅವರು ಹಿಂಜಿದ್ದು ಇಡೀ ದೇಶದ ಜನತೆಯ ಹೃದಯದ ಹತ್ತಿಯ ಹಿಂಜಿ!

ಗಾಂಧಿ ಅನೇಕ ವೈರುಧ್ಯಗಳ ನಡುವೆ ಗೆದ್ದ ಮಹಾಪುರುಷ. ಅಗ್ನಿಯಲ್ಲಿ ಅರಳಿದ ಅರಳು! ಸಂಸಾರಿಯಾಗಿಯೂ ಸಹ ಬ್ರಹ್ಮಚರ್ಯವ ನಡೆಸಿದ ಧೀಮಂತ. ಮೌನಾಗ್ನಿಯಿಂದಲೇ ಜನರ ಬೇಯಿಸಿದ ವಿಚಿತ್ರ ವ್ಯಕ್ತಿತ್ವ, ಬಕಾಸುರನಂತೆ ತಿಂದವರಲ್ಲ ............ ಉಪವಾಸದಲ್ಲೂ ಭೀಮ ಶಕ್ತಿಯನ್ನು ಧೂಮ ವ್ಯಕ್ತಿತ್ವವನ್ನು ಜಗತ್ತಿಗೆ ತೋರಿದ ಅಪರೂಪದ ಪುರುಷೋತ್ತಮ!

ಸಿದ್ಧಲಿಂಗ ಪಟ್ಟಣಶೆಟ್ಟರ ಕವನ **'ಗಾಂಧಿಜಯಂತಿ'** ಈ ಸಾಲುಗಳನ್ನೊಳಗೊಂಡಿದೆ.

"ನಿನ್ನ ತ್ಯಾಗ, ಬಲಿದಾನಕ್ಕೆ
ನಾವಿತ್ತ ಬೆಲೆಗೊತ್ತೆ?
ನಿನ್ನ ಜಯಂತಿ, ನೆನೆಸಿ
ಊರಿಗೊಂದು 'ಗಾಂಧಿಭವನ' ನಿಲಿಸಲಿದ್ದೇವೆ
ಸ್ಮಾರಕನಿಧಿ – ವಾಚನಾಲಯದಲ್ಲಿ
ನಿನ್ನ ಬಗೆಗನೇಕೆ ಪುಸ್ತಕಗಳನ್ನೊಟ್ಟಿದ್ದೇವೆ.
ಅಲ್ಲೊಂದು ಇಲ್ಲೊಂದು ಪ್ರತಿಮೆ ಹುಗಿದು
ನಿನ್ನನ್ನು ಅಮರಗೊಳಿಸಿದ್ದೇವೆ.
ಶತಮಾನೋತ್ಸವಕ್ಕೆ ಭಾರೀ ತಯಾರಿ ನಡೆಸಿದ್ದೇವೆ.
ಈ ಎಲ್ಲ ನೋಡಿ ನೋಡಿ
ನಿನ್ನ ಬಚ್ಚಬಾಯ್ತುಂಬ ನಗೆಹಲ್ಲಾಗಿ ನಗಬೇಕು ನೀನು"

(ಗಾಂಧಿ ಎಂಬುವ ಹೆಸರು, ಪುಟ. ೧೩೭)

ಚಂದ್ರಶೇಖರ ಪಾಟೀಲರು ತಮ್ಮ 'ಗಾಂಧಿ ಅಜ್ಜನ ಮೋರೆ'ಯಲ್ಲಿ ಹೇಗೆ ಜನರು ದೀರ್ಘಭಾಷಣಗಳನ್ನು ಬಿಗಿಯುತ್ತಾರೆ, ಗಾಂಧೀಜಿ ವರ್ಧಂತಿಯ ಸರ್ಕಾರಿ ರಜಾದಿನವನ್ನು ದುರುಪಯೋಗ ಪಡಿಸಿಕೊಂಡು ಹೇಗೆ ಆತನ ಹೆಸರಿನಲ್ಲಿ ಹಣ ಸಂಗ್ರಹಿಸಿ, ತಳವಿಲ್ಲದ ಆಳವರಿಯದ ಜೇಬುಗಳಲ್ಲಿ ಇಳಿಯಬಿಡುತ್ತಾರೆ ಎಂಬುದನ್ನೂ, ಇಷ್ಟಾದರೂ ತನ್ನ ಅನುಯಾಯಿಯಗಳೆಂದು ಹೇಳಿಕೊಳ್ಳುವ ಈ ಜನರ ಅಪಚಾರವನ್ನು ಕಂಡೂ ಗಾಂಧಿ ಅಜ್ಜನ ಮೋರೆ ಕರುಣೆಯಿಂದ ಮುಗುಳ್ನಗುತ್ತಲೇ ಇರುತ್ತದೆ ಎಂಬುದನ್ನೂ ವರ್ಣಿಸಿದ್ದಾರೆ. ಗಾಂಧೀಜಿಯವರ ಮರಣಾನಂತರ ಅವರನ್ನು ಭಾರತದಲ್ಲಿ ಹೇಗೆ ಜ್ಞಾಪಿಸಿಕೊಳ್ಳುತ್ತಿದ್ದಾರೆಂಬುದನ್ನು ಆ ಕವನದಲ್ಲಿ ಚಿತ್ರಿಸಿದ್ದಾರೆ.

ಇಂತಹ ವಿಡಂಬನೆ ಬಹುಮಂದಿ ಕವಿಗಳ ಅದರಲ್ಲೂ ವಿಶೇಷವಾಗಿ ಸ್ವಾತಂತ್ರ್ಯೋತ್ತರ ಯುಗದಲ್ಲಿ ಗಾಂಧೀ ತತ್ತ್ವಗಳ ಬಗ್ಗೆ ತೋರಿ ಬಂದಿರುವ ಕೋಪೋದ್ರಿಕತ ತರುಣರ ಮನಃಪ್ರವೃತ್ತಿಯೇ ಆಗಿದೆ. ಬಹುಶಃ ರಾಷ್ಟ್ರದ ಭವಿಷ್ಯ ಇಂತಹ ತಪ್ಪುಗಳ ಬಗ್ಗೆ ನಾವು ತೋರುವ ಜಾಗೃತಿಯ ಮೇಲೆ ನಿಂತಿದೆ. ಅವು ಕ್ಷಣಿಕವಾದವು. ಗಾಂಧಿ ಎಂಬ ಜ್ಯೋತಿ ಬೆಳಗಿರುವ ಯಶಸ್ಸಿನ ಹಾದಿಯಲ್ಲಿ ನಾವು ಮುನ್ನಡೆಯುವುದು ನಿಶ್ಚಯ ಎಂದು 'ಗಾಂಧಿ ಜ್ಞಾಪಕ ದೀಪ' ಎಂಬ ಕವನದಲ್ಲಿ ಜಿ.ಪಿ. ರಾಜರತ್ನಂ ಭರವಸೆ ನೀಡುತ್ತಾರೆ.

ಗಾಂಧೀಜಿ ಇದ್ದನೆಂಬ ಗುರುತಿಗೆ ಸ್ಮಾರಕ ನಿರ್ಮಿಸಿದ್ದೇವೆ. ಅದಕ್ಕೆ ಪ್ರತಿವರ್ಷ ಹೂಮಾಲೆ ಹಾಕಿ ನೆನಪು ಮಾಡಿಕೊಳ್ಳುತ್ತೇವೆ. ಉಳಿದ ದಿನ ಹಕ್ಕಿಗಳು, ಮನುಷ್ಯರು ಗಲೀಜು ಮಾಡಿರುತ್ತಾರೆ. ಇದನ್ನು ತೋರಿಸಿ ಇದೇನು ಎಂದು ಕೇಳಿದ ಮೊಮ್ಮಗನಿಗೆ ಅಜ್ಜ ಹೇಳುತ್ತಾನೆ – 'ಇದು ಗಾಂಧೀ' – ಹಾಗೆಂದರೇನೆಂದು ಮೊಮ್ಮಗ ಕುತೂಹಲದಿಂದ ಮರುಪ್ರಶ್ನಿಸಿದ್ದಕ್ಕೆ ಅಜ್ಜ – 'ಅವನೊಬ್ಬ ಹುಚ್ಚ' ಎಂದು ಹೇಳಿ, ತನ್ನ ಕಾಲದ ಬ್ರಿಟೀಷರ ಆಡಳಿತವೇ ಚೆನ್ನಾಗಿತ್ತೆಂದು ಅಭಿಪ್ರಾಯಪಡುತ್ತಾನೆ. ಗಾಂಧೀಜಿಯವರು ಕೊಟ್ಟ ತತ್ತ್ವ ಸಿದ್ಧಾಂತ, ಆದರ್ಶದ ಬೀಜಗಳು ಇಂದು ಮತ್ತೆ ನಾಡಿಗೆ ಫಲ ನೀಡಬಹುದೆ? ಎಂಬುದನ್ನು ಕಾತುರದಿಂದ ಕಾಯುತ್ತಿರುವನು. **"ಗಾಂಧೀ ಶತಮಾನೋತ್ಸವ"** – ಕವನದಲ್ಲಿ ಜಿ.ಎಸ್. ಶಿವರುದ್ರಪ್ಪ ಅವರು, ಗಾಂಧೀ ಜಯಂತಿಯ ಶತಮಾನೋತ್ಸವ ಸಂದರ್ಭದಲ್ಲಿ ಈ ದೇಶದ ಸ್ಥಿತಿಗತಿಯನ್ನು ನೆನೆಸಿಕೊಂಡಿರುವರು.

ಈ ನಾಡಿನಲ್ಲಿ ಅಜ್ಞಾನ ಅಂಧಕಾರದ ಮಬ್ಬುಗತ್ತಲೆ ಇದೆ. ಇಂಥದರಲ್ಲಿ 'ಒಬ್ಬ ಮುದುಕನು ಕೋಲೂರಿ ನಡೆಯುವ ಸದ್ದಿನಂತೆ" – ಎಚ್ಚರಿಸಲು ಪ್ರತಿವರ್ಷ ಗಾಂಧೀಜಯಂತಿ ಆಚರಣೆಗೆ ಬರುತ್ತದೆ. ಈ ಕಾಡುವ ನೆರಳು ತೊಲಗಿದರೆ ಸಾಕಪ್ಪ ಎನ್ನುತ್ತೇವೆ. ಇದರಿಂದ ತಪ್ಪಿಸಿಕೊಳ್ಳಲು ಅವನನ್ನು ಹಾಡಿ – ಹರಸಿ ಹೊಗಳುತ್ತೇವೆ. ಅದು ನಂತರ ಮತ್ತೆ ಯಥಾಸ್ಥಿತಿಗೆ ಮರಳುತ್ತೇವೆ. ಅವರ ತತ್ತ್ವ ಆದರ್ಶಗಳಿಗೆ ತಿಲಾಂಜಲಿ ಇಟ್ಟು ಅವರ ಹೆಸರಿನ ಮೇಲೆ ಪ್ರತಿಮೆ, ಫಲಕ, ಬೀದಿ, ಭವನ ನಿರ್ಮಿಸಿದ್ದೇವೆ. ಇದರ ತತ್ತ್ವ – ಸಿದ್ಧಾಂತ – ಆದರ್ಶಗಳು ಇಂದು ಭೂಗೋಲದ ಮೇಲೆ ಯಾವುದೇ ಕತ್ತಲೆ ಕವಿದ ನಾಡಿನಲ್ಲಿ ಬೆಳಕು ಬೀರುತ್ತಿದ್ದರೂ ಈ ನಾಡಿನಲ್ಲಿ ಬೆಳಕು ಬೀರುತ್ತಿಲ್ಲ – ಎಂದು ಬಣ್ಣಿಸಿರುವರು.

ಹೀಗೆ ಸ್ವಾತಂತ್ರ್ಯೋತ್ತರ ಕವನಗಳು ಗಾಂಧೀಜಿಯನ್ನು ಮೌಲ್ಯ ಆದರ್ಶಗಳ ಪ್ರತೀಕವೆಂಬಂತೆಯೇ ಚಿತ್ರಿಸಿವೆ. ಸ್ವಾತಂತ್ರ್ಯಪೂರ್ವದಲ್ಲಿ ಗಾಂಧೀಜಿಯ ವ್ಯಕ್ತಿತ್ವಗಳು ಒಂದು ಬಗೆಯ

ಉದ್ದೀಪನವಾಗಿ ಆ ಕಾಲದ ಜನರ ಬದುಕಿಗೆ ಪ್ರೇರಣೆಯಾದರೆ. ಸ್ವಾತಂತ್ರ್ಯ ಸಂದರ್ಭದಲ್ಲಿ ಸಾಕ್ಷಾತ್ ಸ್ವಾತಂತ್ರ್ಯ ಪುರುಷ, ಶಿಲ್ಪಿಯಾಗಿ ಎಲ್ಲರದೆಯಲ್ಲಿ ಸಂಚಲನ ಮೂಡಿಸುವ ಧೀಶಕ್ತಿ ಸಂಜೀವಿನಿಯಾಗಿದ್ದಾರೆ. ಅಂತೆಯೇ ಸ್ವಾತಂತ್ರ್ಯ ನಂತರದ ಕವಿಗಳು ಚಿತ್ರಿತ ಗಾಂಧಿ – ಆದರ್ಶದ ಮಹಾತ್ಮರಾಗಿ, ಆರಾಧನಾ ಭಾವ ಜ್ಯೋತಿಯಾಗಿ ಅಮರವಾಗಿದ್ದಾರೆ

ಅಧ್ಯಾಯ – ೭

## ಉಪಸಂಹಾರ

೧೯೨೦ರ ಸುಮಾರಿಗೆ ಸಾವಿರದ ಸೂರ್ಯನಂತೆ ತಮ್ಮ ಕೋಟಿ ಕಿರಣ ಪ್ರತಿಭಾ ವಿಶೇಷದಿಂದ ಮೂಡಿ ಆಂಗ್ಲರ ವಿರುದ್ಧ ಬಂಡೆದ್ದ ಮಹಾತ್ಮ ಗಾಂಧೀಜಿಯ ಸ್ವಭಾವ, ಅವರು ಜೀವನದಲ್ಲಿ ಅನುಸರಿಸಿದ ಶಾಂತಿ ಮಂತ್ರ, ಭಾರತೀಯ ಭಾಷೆಗಳಲ್ಲೆಲ್ಲಾ ಅವರ ಗುಣಗಾನ ಕಾವ್ಯವಾಗಿ ಹರಿದಾಡಿದೆ. ಇದಕ್ಕೆ ಕನ್ನಡ ಕಾವ್ಯವೂ ಅಪವಾದವೇನಲ್ಲ.

ಗಾಂಧೀ ಮಹಾತ್ಮನ ವ್ಯಕ್ತಿತ್ವದ ಅವಲೋಕನವೇ ಕನ್ನಡ ನವೋದಯ ಕಾವ್ಯದಲ್ಲಿ ಹೆಪ್ಪುಗಟ್ಟಿದೆ. ಗಾಂಧೀಜಿಯನ್ನು ಕುರಿತು ಬರೆಯದ ರಮ್ಯ ಕವಿಯೋ ಇಲ್ಲವೇನೋ ಇದು ಆಧುನಿಕ ಕವಿಗಳ ಇತ್ಯಾತ್ಮಕ ದೃಷ್ಟಿಕೋನವನ್ನು ಪರೋಕ್ಷವಾಗಿ ಸೂಚಿಸುತ್ತದೆ.

ಬುದ್ಧ, ಸಾಕ್ರಟೀಸ್, ಕ್ರೈಸ್ತ, ಪೈಗಂಬರ, ಮಹಮದ್, ಬಸವಣ್ಣ, ಇವರುಗಳಂತೆ ಗಾಂಧೀಜಿ ಅವರೂ ಕೂಡ ಒಬ್ಬ ಲೋಕಮಾನ್ಯ ಮಹಾನ್ ವ್ಯಕ್ತಿ. ೨೦ನೆಯ ಶತಮಾನ ಕಂಡ ಬಹುಮುಖೀ ವ್ಯಕ್ತಿತ್ವದ ಯುಗ ಪುರುಷ. ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ಧೀರ ಸೇನಾನಿಯಾಗಿ ಪ್ರಬಲ ಬ್ರಿಟಿಷ್ ಸಾಮ್ರಾಜ್ಯ ನಮ್ಮ ದೇಶದಿಂದ ಕಾಲ್ತೆಗೆಯುವಂತೆ ಮಾಡಿದ ಧೀಮಂತ ಶಕ್ತಿ. ಇದು ಅವರ ಭೂಮ ಸಾದೃಶ ವ್ಯಕ್ತಿತ್ವದ ಕೇವಲ ಒಂದು ಭಾಗ ಮಾತ್ರ ಎನ್ನುವುದನ್ನು ಯಾರೂ ಅಲ್ಲಿ ಅಲ್ಲಗಳೆಯುವಂತಿಲ್ಲ. ಗಾಂಧೀಜಿ ಶ್ರೇಷ್ಟ ಚಿಂತಕರು, ದಾರ್ಶನಿಕರು, ಸಮಾಜ ಸುಧಾರಕರು. ಇವೆಲ್ಲಕ್ಕಿಂತ ಮಿಗಿಲಾಗಿ ಸತ್ಯಾನ್ವೇಷಕರು.

೧೯–೨೦ನೆಯ ಶತಮಾನದಲ್ಲಿ ಸೂರ್ಯನೇ ಮುಳುಗದ ಬ್ರಿಟಿಷ್ ಸಾಮ್ರಜ್ಯದ ವಿರುದ್ಧ ಸತ್ಯ, ಅಹಿಂಸೆ, ಪ್ರೇಮ ತುಂಬಿದ ಮಾರ್ಗದಲ್ಲಿ ಗಾಂಧೀ ನಿರಾಯುಧರಾಗಿ ಹೋರಾಟ ನಡೆಸಿದರು. ಹೀಗೆ ಸ್ವಾತಂತ್ರ್ಯ ಗಳಿಸಿದ್ದನ್ನು ಜಗತ್ತೇ ಅಚ್ಚರಿಯಿಂದ ನೋಡಿತ್ತು. ಇಂತಹ ಅಲೌಕಿಕ ವ್ಯಕ್ತಿ, ಗಾಂಧೀಜಿ. "ಇಂತಹ ಒಬ್ಬ ದಿವ್ಯ ಪುರುಷ ರಕ್ತಮಾಂಸದ ಎಲುಬಿನ ಹಂದರದಲ್ಲಿದ್ದನೆಂಬುದನ್ನು ಸಹ ಮುಂದಿನ ಪೀಳಿಗೆ ನಂಬಲಾರದೆ ಹೋದೀತು" ಎಂಬ ಮಹಾವಿಜ್ಞಾನಿ ಐನ್‌ಸ್ಟೀನರ ಮಾತುಗಳು ಅರ್ಥಪೂರ್ಣವಾದವು. ಗಾಂಧೀಜಿ ಪ್ರಾಮಾಣಿಕವಾಗಿ ನಡೆದ ಸತ್ಯ, ಅಹಿಂಸೆ, ಪ್ರೇಮ, ಹರಿಜನೋದ್ಧಾರ, ಹಿಂದೂ – ಮುಸ್ಲಿಂ ಭಾತೃತ್ವ ಹಾಗೂ ಗ್ರಾಮೀಣಾಭಿವೃಧ್ಧಿ ವಿಚಾರಗಳು ಎಂದೆಂದಿಗೂ ಸತ್ಯ ಮತ್ತು ಅಮರ.

ಯಾವಾಗ ಮಹಾತ್ಮಗಾಂಧೀಜಿಯವರ ಉಜ್ವಲ ವ್ಯಕ್ತಿತ್ವ ಈ ರಾಷ್ಟ್ರದ ಜನತೆಯ ಹೃದಯದಲ್ಲಿ ಸ್ವಾತಂತ್ರ್ಯದ ಕಿಚ್ಚನ್ನು ಹತ್ತಿಸಿತೋ, ಆಗ, ಆಯಾ ರಾಜ್ಯದ ಜನತೆಯ 'ರಾಜಭಕ್ತಿ' ಮೊಟ್ಟಮೊದಲಿಗೆ ನಿಜವಾದ ಅರ್ಥದಲ್ಲಿ ರಾಷ್ಟ್ರಪ್ರೇಮವಾಗಿ ಪರಿವರ್ತಿತವಾಯಿತು. ಅಲ್ಲದೆ, ಆಯಾ ರಾಜ್ಯದ ಆಳರಸರು ಬ್ರಿಟಿಷ್ ಪ್ರಜಾಪ್ರಭುತ್ವದ ನಿಯಂತ್ರಣ, ಮಾಧ್ಯಮಗಳಾಗಿ ಕಂಡ ಕಾರಣದಿಂದ ಮತ್ತು ಜನತೆಯನ್ನು ಪಾರತಂತ್ರ್ಯದಲ್ಲಿರಿಸಲು ಪ್ರಯತ್ನಿಸಿದ ಕಾರಣದಿಂದ, ಅದುವರೆಗೂ ಅಲ್ಲಲ್ಲಿನ ಜನತೆಗೆ ಆಯಾ ರಾಜ್ಯದ ರಾಜರುಗಳ ಬಗೆಗಿದ್ದ ರಾಜಭಕ್ತಿ ಚೂರು ಚೂರಾಯಿತು. ಈ ಅವಕಾಶವನ್ನು ಸದುಪಯೋಗಪಡಿಸಿಕೊಂಡು ರಾಷ್ಟ್ರೀಯ ನಾಯಕರು ಜನತೆಯನ್ನು ಸಂಘಟಿಸಿ ಸ್ವಾತಂತ್ರ್ಯ ಸಂಗ್ರಾಮವನ್ನು ಹೂಡಿತು.

ಮಹಾತ್ಮಗಾಂಧೀಜಿಯವರ ಮುಂದಾಳುತನದಲ್ಲಿ ಈ ನಾಡಿನ ಮಣ್ಣ ಕಣಕಣವೂ ಸಿಡಿಲಾಗಿ ಹುಲ್ಲುಕಡ್ಡಿಯೂ ಬ್ರಹ್ಮಾಸ್ತ್ರವಾಗಿ ನಿಂತು, ಪರಕೀಯ ಪ್ರಜಾಪ್ರಭುತ್ವದ ವಿರುದ್ಧವಾಗಿ ಸುಮಾರು ೩ ದಶಕಗಳ ಕಾಲ ನಡೆಯಿಸಿದ ಆ ರೋಮಾಂಚನಕಾರಿಯಾದ ಸಾಹಸ ನಮ್ಮ ಪಾಲಿಗೆ ಕೇವಲ ಒಂದು ನೆನಪಾಗಿದೆ.

ಚಾರಿತ್ರಿಕ, ಸಾಹಿತ್ಯಿಕ ದಾಖಲೆಗಳಲ್ಲಿರುವ, ಕೆದಕಿದರೆ ಇನ್ನೂ ಹೊಗೆಯಾಡುವ ಈ ಹೋರಾಟದ ಸಂಗತಿ ಸಾಹಿತಿಗಳ ಕಲ್ಪನೆಗೂ ಇಂದಿಗೂ ಸ್ಫೂರ್ತಿಯನ್ನೊದಗಿಸುವಷ್ಟಿದೆ. ಈ ಹೋರಾಟದ ಕಾಲದಲ್ಲಿ ಜನತೆಯನ್ನು ಪ್ರೇರೇಪಿಸಿದ ಸಾಹಿತಿಗಳ ಪಾತ್ರವೂ ಹಾಗೂ ಹೋರಾಟಕ್ಕೆ ಸ್ಫೂರ್ತಿ ನೀಡಿದ ರಾಷ್ಟ್ರದ ನಾಯಕರು, ಹೋರಾಟದಿಂದ ಸ್ಫೂರ್ತಿಗೊಂಡ ಸಾಹಿತ್ಯಾಭಿವ್ಯಕ್ತಿಯೂ ಗಣನೀಯವಾಗಿದೆ.

ಅವರು ನಮ್ಮ ರಾಷ್ಟ್ರದ ಅದ್ವಿತೀಯ ಕರ್ಮಯೋಗಿ; ಅನುಪಮ ದಿವ್ಯಜ್ಞಾನಿ; ಅನನ್ಯ ರಾಷ್ಟ್ರಪ್ರೇಮಿ; ಉಜ್ವಲ ಆಧ್ಯಾತ್ಮ ಜೀವಿ; ನೋಡಲು ಹಾಲು ಹಸುಳೆಯ ಮಂದಹಾಸದ ಮುಗ್ಧ ಮಗುವಿನಂಥವರಾದರೂ, ವ್ಯಕ್ತಿತ್ವದಲ್ಲಿ ಗಾಂಧೀಜಿ ಹಿಮಾಲಯದೆತ್ತರ ಮೀರಿ ಬೆಳೆದವರು. ಜನ ಮನದಾಳದಲ್ಲಿ ಉಳಿದವರು.

ಇಡೀ ಜಗತ್ತಿನ ಜನರನ್ನು ತನ್ನ ವ್ಯಕ್ತಿತ್ವದಿಂದ ಹಾಗೂ ವಿಚಾರಧಾರೆಯಿಂದ ಸೆಳೆದ ಮಹಾನ್ ಚೇತನ – ಗಾಂಧೀಜಿ. ಅಂಥ ಅಸೀಮ ಪ್ರಭಾವದ ಅನನ್ಯ ಇರುವಿಕೆಯ ಅಪರೂಪದ ವ್ಯಕ್ತಿಯನ್ನು ಕುರಿತು ಕನ್ನಡದ ನವೋದಯ ಕವಿಗಳು ಕಂಡ ಗಾಂಧೀ ಚಿತ್ರಣವನ್ನು ಈ ಪ್ರಬಂಧದಲ್ಲಿ ಕಾಲಮಿತಿಯೊಳಗೆ ದಾಖಲಿಸುವ ಪ್ರಯತ್ನ ಸಾಗಿದೆ.

ಸ್ವಾತಂತ್ರ್ಯ ಚಳವಳಿಯ ಸಂದರ್ಭದ ಗಾಂಧೀಯುಗದ ಕಾಲದಲ್ಲಿಯೇ ಮೂಡಿ ಬಂದ ನವೋದಯ ಸಾಹಿತ್ಯ ಗಾಂಧೀಜಿಯವರ ರಾಷ್ಟ್ರನಿರ್ಮಾಣದಲ್ಲಿ ಜನರನ್ನು ಒಂದುಗೂಡಿಸುವ ಕಾರ್ಯ ಸಾಧನೆಗಳನ್ನು, ಅವರ ವಿಶ್ವಮಾನ್ಯ ವ್ಯಕ್ತಿತ್ವದ ಚಿತ್ರಣವನ್ನು ಕಟ್ಟಿಕೊಟ್ಟಿರುವ ಕವನಗಳು ವಿಫುಲವಾಗಿ ಸೃಷ್ಟಿಯಾಗಿವೆ. ಸ್ವಾತಂತ್ರ್ಯಪೂರ್ವದಲ್ಲಿ ದೇಶದ ಸ್ವಾತಂತ್ರ್ಯಕ್ಕಾಗಿ ಹಂಬಲಿಸಿದ, ಕವಿಗಳು ಅದರ ಪ್ರೇರಕ ಶಕ್ತಿಗಳಾದ ಗಾಂಧೀ ಮಹಾತ್ಮರಂಥವರನ್ನು ಕಾವ್ಯದ ವಸ್ತುವಾಗಿಸಿ ಬಿಂಬಿಸಿದರು. ಇದು ಕೂಡ ಅಧ್ಯಯನ ಯೋಗ್ಯವೆಂದು ಭಾವಿಸಿ ಅಧ್ಯಯನ ಮಾಡಿ ಸಂಕ್ಷಿಪ್ತ ರೂಪದ ಚಿತ್ರಣವನ್ನು ಕಟ್ಟಿಕೊಡುವ ಪ್ರಯತ್ನವನ್ನು ಮಾಡಲಾಗಿದೆ.

ಗಾಂಧೀಜಿ ಕೇವಲ ಭಾರತೀಯರಿಗಷ್ಟೇ ಪ್ರಿಯರಲ್ಲ; ಜಗದ ಜನಕ್ಕೇ ಪ್ರಿಯರು. ಎಲ್ಲ ಕಾಲದ; ಎಲ್ಲ ದೇಶದ; ಎಲ್ಲ ಜನದ ಎದೆಗಳಲಿ ಹರಿದಿರುವ ಒಲವು ಒಂದೇ ಎಂದು ವಿಶ್ವಕ್ಕೇ ಸಾರಿದ ಶಾಂತಿದೂತ – ಗಾಂಧೀ; ತಾತ!

ನವೋದಯ ಕವಿಗಳು ಗಾಂಧಿಯನ್ನು 'ವ್ಯಕ್ತಿಯಾಗಿ' ಕಂಡದ್ದಕ್ಕಿಂತ ಹೆಚ್ಚಾಗಿ ಮೌಲ್ಯಗಳ ಸಂಕೇತವಾಗಿ ಕಂಡದ್ದೇ ವಿಶೇಷ. ಮಹಾತ್ಮರಾದ ಗಾಂಧಿ ಕೆಲವರಿಗೆ ಆದರ್ಶವಾದರೆ ಕೆಲವರಿಗೆ ಸ್ವಾತಂತ್ರ್ಯ ಪುರುಷ. ಒಬ್ಬೊಬ್ಬರ ಅಭಿವ್ಯಕ್ತಿಯಲ್ಲಿ ಆರಾಧನಾ ಭಾವವಾದರೆ, ಮತ್ತೊಬ್ಬರ ಅಭಿವ್ಯಕ್ತಿಯಲ್ಲಿ ಮಹಾಯೋಗಿ, ಸಮಾಜ ಸುಧಾರಕ, ಮತ್ತೆ ಕೆಲವು ಕವಿಗಳಿಗೆ ಮಹಾನ್ ಚೇತನವಾದರೆ ಉಳಿದವರಿಗೆ ಸಾತ್ವಿಕ ದೇವಮಾನವ. ಹಾಗಾಗಿ ನವೋದಯ ಕವಿಗಳು ಕಂಡ ಗಾಂಧಿಯ ಚಿತ್ರಣ. ಅದು ಸ್ವಾತಂತ್ರ್ಯ ಪೂರ್ವವೇ ಇರಲಿ, ಸ್ವಾತಂತ್ರ್ಯದ ಸಂದರ್ಭವೇ ಆಗಿರಲಿ, ಸ್ವಾತಂತ್ರ್ಯೋತ್ತರವೇ ಆಗಿರಲಿ ಒಟ್ಟಿನಲ್ಲಿ ಎಲ್ಲರಿಗೂ ಪ್ರೇರಕ ಮಾತ್ರವಲ್ಲ ,ಪೂಜ್ಯಭಾವನೆಯ ಯುಗ ಪುರುಷ – ಭಾರತಾಂಬೆಯ ದಾಸ್ಯ ಬಿಡಿಸಲು ಬಂದ ದೇವಮಾನವ. ವ್ಯಕ್ತಿಯಾಗಿ ಜನಿಸಿ ಎಲ್ಲರೂ ರೂಢಿಸಿಕೊಳ್ಳುವ ಮೌಲ್ಯಗಳ ಸಾಕಾರ ಮಾಡಿಕೊಳ್ಳುತ್ತಲೇ ನನ್ನ ಜೀವನವೇ ನನ್ನ ಸಂದೇಶವೆಂದ ಬಾಪೂವಿನ ಚಿಂತನೆಗಳು ಎಂದೆಂದಿಗೂ ಪ್ರಸ್ತುತವೆನಿಸದೇ ಇರಲಾರದು. ಶಸ್ತ್ರಾಸ್ತ್ರಗಳಿಂದ ಗೆಲ್ಲಲಾಗದ ಆಂಗ್ಲರನ್ನು ಶಸ್ತ್ರಾಸ್ತ್ರಗಳಿಲ್ಲದೇ ಸತ್ಯಾಗ್ರಹ, ಅಸಹಕಾರ, ಉಪವಾಸಗಳಿಂದಲೇ ಮಣಿಸಿದ ಮಹಾಮಹಿಮ. ಇಂತಹ ಮಹಾನ್ ಶಕ್ತಿಯ ಅಧ್ಯಯನ ಸರ್ವಕಾಲದಲ್ಲೂ ಅಭ್ಯಾಸಯೋಗ್ಯ.

ಸ್ವಾತಂತ್ರ್ಯಸಂಗ್ರಾಮದ ಸಮಗ್ರ ಚಿತ್ರಣದಲ್ಲಿ ರಾಷ್ಟ್ರೀಯತೆ ಹಾಗೂ ಗಾಂಧೀ ಏಕೀಕೃತಗೊಂಡು ವಿಜೃಂಭಿಸಲ್ಪಡುವುದನ್ನು ಕನ್ನಡ ಕಾವ್ಯ ಸಂದರ್ಭದಲ್ಲಿ ನೋಡಬಹುದು. ಗಾಂಧಿ ಒಬ್ಬ ವ್ಯಕ್ತಿಯಾಗಿ, ಒಬ್ಬ ರಾಷ್ಟ್ರವಾಗಿ ಜನತೆಯ ಮೇಲೆ ಎಂತಹ ಪ್ರಭಾವವನ್ನು ಬೀರಿದರೋ ಅಷ್ಟೇ ಅಥವಾ ಅದಕ್ಕೂ ಹೆಚ್ಚಿನದೇ ಪ್ರಭಾವವನ್ನು ಅವರ ಸಾವೂ ಬೀರಿದೆ ಎನ್ನುವುದರಲ್ಲಿ ಸಂಶಯವಿಲ್ಲ. ಅದಕ್ಕೆ ಸ್ವಾತಂತ್ರ್ಯೋತ್ತರದಲ್ಲಿ ದಾಖಲಾದ ಗಾಂಧೀ ಕುರಿತ ಕವನಗಳೇ ಸಾಕ್ಷಿಭೂತವಾಗಿವೆ.

ಸ್ವಾತಂತ್ರ್ಯಪೂರ್ವ ಕಾಲದಲ್ಲಿದ್ದಂತೆಯೇ ಸ್ವಾತಂತ್ರ್ಯೋತ್ತರ ಸಂದರ್ಭದಲ್ಲೂ ಗಾಂಧೀಜಿ ಕುರಿತ ಅನೇಕ ಕವಿತೆಗಳನ್ನು ನೋಡಬಹುದಾಗಿದೆ.

ಒಟ್ಟು ಆರು ಅಧ್ಯಾಯಗಳಲ್ಲಿ ಸಾಗಿಬಂದ ಈ ಅಧ್ಯಯನದಲ್ಲಿ ಆರಂಭದ ಎರಡು ಹಾಗೂ ಕೊನೆಯ ಉಪಸಂಹಾರ ಎಂಬ ಎರಡು ಅಧ್ಯಾಯಗಳನ್ನು ಹೊರತುಪಡಿಸಿದರೆ ಉಳಿದ ಮೂರು ಅಧ್ಯಾಯಗಳು ಸ್ವಾತಂತ್ರ್ಯಪೂರ್ವ ಹಾಗೂ ಸ್ವಾತಂತ್ರ್ಯೋತ್ತರ ಎಂಬ ಪರಿಧಿಯೊಳಗೆ ಮಹಾತ್ಮಗಾಂಧೀಜಿಯವರನ್ನು ಕುರಿತು ರಚಿಸಲಾದ ನವೋದಯ ಕವನಗಳನ್ನು ಪ್ರಾತಿನಿಧಿಕ ನೆಲೆಯಿಂದ ವಿಶ್ಲೇಷಿಸಿ ನವೋದಯ ಕವಿಗಳು ಕಂಡ ಗಾಂಧೀ ಚಿತ್ರಣವನ್ನು ಅಧ್ಯಯನ ಮಾಡಲಾಗಿದೆ. ಆದರೆ ಇದು ಒಂದು ಆರಂಭಿಕ ಪ್ರಯತ್ನವಷ್ಟೇ. ಆಧುನಿಕ ಕನ್ನಡ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲೂ ಒಂದಲ್ಲ ಒಂದು ಬಗೆಯಲ್ಲಿ ಗಾಂಧೀಜಿಯವರ ಪ್ರಭಾವದಿಂದ ಪ್ರೇರಿತವಾದ ಸಾಹಿತ್ಯ ಸೃಷ್ಟಿಯಾಗಿದೆ. ಇವೆಲ್ಲವನ್ನು ಒಗ್ಗೂಡಿಸಿ ಅಧ್ಯಯನ ಮಾಡಿದರೆ ಒಂದು ಮಹಾಪ್ರಬಂಧ ರಚಿಸಲು ಸಾಧ್ಯವಾಗುವಷ್ಟು ಆಕರಗಳನ್ನು ಈ ವಿಷಯ ಒಳಗೊಳ್ಳುತ್ತದೆ ಎಂಬ ಅಂಶವನ್ನು ಇಲ್ಲಿಯೇ ವಿನಯಪೂರ್ವಕವಾಗಿ ತಿಳಿಯಬಯಸುತ್ತೇನೆ.

ಇಂಥ ಅದ್ಭುತ ಶಕ್ತಿಯ ಐಹಿಕ ರೂಪ ಮರೆಯಾಗಿ ಪಂಚಭೂತಗಳಲ್ಲಿ ಒಂದಾಗಿ ಹೋಗಿರಬಹುದು. ಆದರೆ ಆ ಅಸಮಾನ್ಯ ಶಕ್ತಿ ಮನುಕುಲದ ಮೇಲೆ ಬೀರಿದ ಪ್ರಭಾವ ಎಂದಿಗೂ ಅಚ್ಚಳಿಯದೆ ಚಿರಂತನವಾಗಿ ಉಳಿಯುವಂಥದ್ದು. ಒಟ್ಟಿನಲ್ಲಿ ಇಪ್ಪತ್ತನೆಯ ಶತಮಾನದಲ್ಲಿ ವ್ಯಕ್ತಿ ರೂಪವಾಗಿ ಗಾಂಧೀಜಿಯ ಅವರು ಬೀರಿರುವಷ್ಟು ಪ್ರಭಾವವನ್ನು ಮತ್ತ್ಯಾರೂ ಬೀರಿರಲಾರರು ಎಂದೂ, ವರ್ತಮಾನದ ರಾಜಕೀಯ ಹಾಗೂ ಅದಕ್ಕೂ ಮಿಗಿಲಾದ ವಲಯಗಳ ಪ್ರಭಾವದಲ್ಲಿ ಕನ್ನಡ ಸಾಹಿತ್ಯವನ್ನು ಅಧ್ಯಯನ ಮಾಡಬೇಕಾದ ಅವಶ್ಯವನ್ನು ಮುಂದಿಟ್ಟು ಬರವಣಿಗೆಗೆ ಬಿಂದುವಿಡಲು ಬಯಸುತ್ತೇನೆ.

## ಆಕರ ಗ್ರಂಥಗಳು


| ಕ್ರಸಂ. | ಕೃತಿ | ವರ್ಷ | ಲೇಖಕರು ಮತ್ತು ಪ್ರಕಾಶನ |
|---|---|---|---|
| ೧. | ಅಪಾರಕರುಣೆ | ೧೯೫೧ | **ಮುಗಳಿ ರಂ.ಶ್ರೀ**<br>ಕಾವ್ಯ ಪ್ರಕಾಶನ ಸಮಿತಿ<br>ಸಾಂಗಲಿ |
| ೨. | ಅಮರನಾದೈ ತಂದೆ (ಕಾವ್ಯಾಂಜಲಿ) | ೧೯೫೨ | **ಪ.ಶು. ಭಟ್ಟ (ಸಂ.)**<br>ಗೆಳೆಯರ ಗುಂಪು<br>ಶಿರಸಿ, ಉತ್ತರ ಕನ್ನಡ |
| ೩. | ಅರಳುಮರಳು | ೧೯೬೮ | **ಬೇಂದ್ರೆ ದ.ರಾ.**<br>ಶ್ರೀಮಾತಾ ಮಕರಿ<br>ಡಾ. ದ.ರಾ. ಬೇಂದ್ರೆ ಮಾರ್ಗ<br>ಸಾಧನಕೇರಿ, ಧಾರವಾಡ |
| ೪. | ಕಾರಹುಣ್ಣಿವೆ | ೧೯೫೧ | **ಬೇಟಗೇರಿ ಕೃಷ್ಣಶರ್ಮ (ಆನಂದಕಂದ)**<br>ಶರತ್ ಪ್ರಕಾಶನ<br>ಧಾರವಾಡ |
| ೫. | ಕುವೆಂಪು ಸಮಗ್ರ ಕಾವ್ಯ ಭಾಗ – ೧ | ೨೦೦೦ | **ಡಾ. ಕೆ.ಸಿ. ಶಿವಾರೆಡ್ಡಿ (ಸಂ.)**<br>ಪ್ರೊ. ಎ.ವಿ. ನಾವಡ<br>ನಿರ್ದೇಶಕರು, ಪ್ರಸಾರಾಂಗ<br>ಕನ್ನಡ ವಿಶ್ವವಿದ್ಯಾನಿಲಯ<br>ಹಂಪಿ, ವಿದ್ಯಾರಣ್ಯ |
| ೬. | ಗಾಂಧಿ | ೧೯೭೭ | **ಚಂದ್ರಶೇಖರ ಪಾಟೀಲ (ಸಂ.)**<br>ಸಂಕ್ರಮಣ ಪ್ರಕಾಶನ<br>ಧಾರವಾಡ – ೦೮ |
| ೭. | ಗಾಂಧಿ ಎಂಬುವ ಹೆಸರು | ೧೯೯೮ | **ಚಂದ್ರಶೇಖರ ಪಾಟೀಲ (ಸಂ.)**<br>**ಶಶಿಕಲಾ ವೀರಯ್ಯಸ್ವಾಮಿ**<br>ಪಂಪ ಮಹಾಕವಿ ರಸ್ತೆ<br>ಚಾಮರಾಜಪೇಟೆ<br>ಬೆಂಗಳೂರು – ೦೧೮ |
| ೮. | ದಿನಕರ ಚೌಪದಿ | ೧೯೭೮ | **ದೇಸಾಯಿ ದಿನಕರ**<br>ಕೆನರಾ ವೆಲ್‌ಫೇರ್ ಟ್ರಸ್ಟ್<br>ಅಂಕೋಲಾ |

| | | | |
|---|---|---|---|
| ೯. | ಬಾಪೂ ಕಾವ್ಯಾಂಜಲಿ | ೧೯೬೦ | **ರಾಯಧಾರವಾಡಕರ (ಸಂ.)**<br>ರಾ.ಶ್ರೀ ಹುಕ್ಕೇರಿಕರ<br>ಗಾಂಧಿ ಸ್ಮಾರಕ ನಿಧಿ<br>ಕರ್ನಾಟಕ ಶಾಖೆ<br>ರವೀಂದ್ರ ಮುದ್ರಣಾಲಯ<br>ಧಾರವಾಡ |
| ೧೦. | ಬಾಸಿಗ | ೧೯೪೦ | **ಮುಗಳಿ ರಂ.ಶ್ರೀ**<br>ಮನೋಹರ ಗ್ರಂಥ ಪ್ರಕಾಶನ ಸಮಿತಿ<br>ಧಾರವಾಡ |
| ೧೧. | ಬೇಂದ್ರೆ ಸಮಗ್ರ ಕಾವ್ಯ ದರ್ಶನ | ೨೦೦೪ | **ವಾಮನಬೇಂದ್ರೆ (ಸಂ.)**<br>ದ.ರಾ. ಬೇಂದ್ರೆ ಸಂಶೋಧನಾ ಸಂಸ್ಥೆ<br>ಬೇಂದ್ರೆ ಪ್ರತಿಷ್ಠಾನ<br>ಧಾರವಾಡ |
| ೧೨. | ಮಲ್ಲಿಗೆಯ ಮಾಲೆ | ೨೦೧೨ | **ಕೆ.ಎಸ್. ನರಸಿಂಹಸ್ವಾಮಿ**<br>ವಸಂತ ಪ್ರಕಾಶನ<br>ಬೆಂಗಳೂರು |
| ೧೩. | ಶತಾಬ್ಧಿ ದೀಪ | ೧೯೭೧ | **ಡಾ.ಶ್ರೀ ಶಿವಕುಮಾರ ಸ್ವಾಮಿಗಳು (ಸಂ.)**<br>ಡಿ.ಎ. ರಾಧಾಕೃಷ್ಣಶೆಟ್ಟಿ<br>ಜಯನಗರ, ಲಿಪಿ ಮುದ್ರಣ<br>ಬಸವನಗುಡಿ<br>ಬೆಂಗಳೂರು – ೧೧ |
| ೧೪. | ಶಿವರುದ್ರಪ್ಪ ಜಿ.ಎಸ್. ಅವರ ಸಮಗ್ರ ಕಾವ್ಯ | ೧೯೯೧ | **ಶಿವರುದ್ರಪ್ಪ ಜಿ.ಎಸ್.**<br>ಸ್ನೇಹ ಪ್ರಕಾಶನ<br>ಬೆಂಗಳೂರು |
| ೧೫. | ಸ್ವಾತಂತ್ರ್ಯ ಸಮರದ ಗೇಯ ಗೀತೆಗಳು | ೧೯೯೮ | **ಡಾ.ಸೂರ್ಯನಾಥ ಕಾಮತ್ (ಸಂ.)**<br>ಕರ್ನಾಟಕ ಸಾಹಿತ್ಯ ಅಕಾಡೆಮಿ<br>ಬೆಂಗಳೂರು |
| ೧೬. | ಸ್ನೇಹ ವಿಶ್ವಾಸ ಸಮಗ್ರ ಕಾವ್ಯ ಸಂಪುಟ | ೧೯೯೦ | **ಸೀತಾರಾಮಯ್ಯ ವಿ.**<br>ವೀ.ಸೀ. ಸಂಪದ<br>ಅಶೋಕ ನಗರ<br>ಬೆಂಗಳೂರು – ೧ |

# ಪರಾಮರ್ಶನ ಗ್ರಂಥಗಳು


| ಕ್ರಸಂ. | ಕೃತಿ | ವರ್ಷ | ಲೇಖಕರು ಮತ್ತು ಪ್ರಕಾಶನ |
|---|---|---|---|
| ೧. | ಇಪ್ಪತ್ತನೆಯ ಶತಮಾನದ ಕನ್ನಡ ಸಾಹಿತ್ಯ ಘಟ್ಟಗಳು | ೨೦೦೨ | **ಡಾ. ಬಸವರಾಜ ಸಾದರ (ಸಂ.)**<br>ಕರ್ನಾಟಕ ವಿದ್ಯಾವರ್ಧಕ ಸಂಘ<br>ಧಾರವಾಡ |
| ೨. | ಕನ್ನಡ ನವೋದಯ ಕಾವ್ಯ – ಒಂದು ಪುನರ್ ಮೌಲ್ಯಮಾಪನ | ೨೦೦೪ | **ಡಾ. ದೊಡ್ಡರಂಗೇಗೌಡ**<br>ಸುಮುಖ ಪ್ರಕಾಶನ<br>ಬೆಂಗಳೂರು |
| ೩. | ಕರ್ನಾಟಕ ರಾಜಕೀಯ ಚಿಂತನೆ (ಎಸ್.ಎನ್. ಸಂಸ್ಮರಣ ಗ್ರಂಥ) | ೨೦೦೩ | **ದೇಜಗೌ (ಪ್ರಸಂ.)**<br>ಎಸ್. ನಿಜಲಿಂಗಪ್ಪ ಪ್ರತಿಷ್ಠಾನ ಮತ್ತು<br>ಲಕ್ಷ್ಮೀ ಮುದ್ರಣಾಲಯ<br>ಚಾಮರಾಜಪೇಟೆ<br>ಬೆಂಗಳೂರು |
| ೪. | ಕರ್ನಾಟಕ ಸಂಗಾತಿ | ೨೦೦೨ | **ಬರಗೂರು ರಾಮಚಂದ್ರಪ್ಪ (ಪ್ರಸಂ.)**<br>ಚ. ಶ್ರೀನಿವಾಸರಾಜು (ಸಂ.)<br>ಬಸವರಾಜ ಕಲ್ಗುಡಿ<br>ಕನ್ನಡ ಅಭಿವೃದ್ಧಿ ಪ್ರಾಧಿಕಾರ<br>ಬೆಂಗಳೂರು |
| ೫. | ಕುವೆಂಪು ಕಂಡಂತೆ ಗಾಂಧೀಜಿ | ೨೦೦೫ | **ಪ್ರೊ. ದೇಜಗೌ**<br>ಪ್ರಸಾರಾಂಗ<br>ಮೈಸೂರು ವಿಶ್ವವಿದ್ಯಾನಿಲಯ<br>ಮೈಸೂರು |
| ೬. | ಗ್ರಾಮೀಣ ಸಾಂಸ್ಕೃತಿಕ ಪರಂಪರೆ ಮತ್ತು ರಾಷ್ಟ್ರೀಯ ಭಾವೈಕ್ಯ | ೧೯೯೪ | **ಸಂಗಮೇಶ ಗುಜಗೊಂಡ**<br>ಪ್ರಸಾರಾಂಗ<br>ಕರ್ನಾಟಕ ವಿಶ್ವವಿದ್ಯಾನಿಲಯ<br>ಧಾರವಾಡ |
| ೭. | ಗಾಂಧೀ ಮತ್ತು ಕರ್ನಾಟಕ | ೧೯೬೯ | **ಸಿದ್ಧವನಹಳ್ಳಿ ಕೃಷ್ಣಶರ್ಮ (ಸಂ.)**<br>ಮೈಸೂರು ರಾಜ್ಯಗಾಂಧಿಸ್ಮಾರಕ ನಿಧಿ<br>ಗಾಂಧಿಭವನ<br>ಬೆಂಗಳೂರು – ೦೧ |

| | | | |
|---|---|---|---|
| ೮. | ಗಾಂಧೀ ಸಾಹಿತ್ಯ | ೧೯೪೧ | **ಡಾ. ಸಿದ್ದವನಹಳ್ಳಿ ಕೃಷ್ಣಶರ್ಮ**<br>ಗಾಂಧೀ ಸಾಹಿತ್ಯ ಭಂಡಾರ<br>ಸಾಧನ ಮುದ್ರಣಾಲಯ<br>ಬೆಂಗಳೂರು |
| ೯. | ಗಾಂಧೀಜಿ : ಒಂದು ಪುನರ್ದರ್ಶನ | ೧೯೮೬ | **ಎಚ್ಚೆಸ್ಕೆ (ಸಂ.)**<br>ಆಕಾಶವಾಣಿ<br>ಮೈಸೂರು |
| ೧೦. | ಗಾಂಧೀಜಿ ಮತ್ತು ಸ್ವಾತಂತ್ರ್ಯ ಸಂಗ್ರಾಮ | ೨೦೦೫ | **ಎಸ್.ವಿ. ಶ್ರೀನಿವಾಸರಾವ್ (ಲೇ.)**<br>ಪ್ರಸಾರಾಂಗ<br>ಮೈಸೂರು ವಿಶ್ವವಿದ್ಯಾನಿಲಯ<br>ಮೈಸೂರು ೦೦೬ |
| ೧೧. | ದಕ್ಷಿಣ ಕನ್ನಡ ಕಾವ್ಯದ ವಿಭಿನ್ನ ನೆಲೆಗಳು | ೨೦೦೨ | **ಡಾ. ಸಂತೋಷ ಚೊಕ್ಕಾಡಿ**<br>ಕರ್ನಾಟಕ ಸಂಘ<br>ಪುತ್ತೂರು – ೦೨ |
| ೧೨. | ನದಿಯಾದ ನೀರ ಬಿಂದು | ೨೦೧೧ | **ಡಾ. ಎ.ಆರ್. ಮದನ್‌ಕುಮಾರ್ (ಲೇ.)**<br>ಚಂದ್ರಿಕ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್<br>೩ನೇ ಕ್ರಾಸ್, ಚಾಮುಂಡಿಪುರಂ<br>ಮೈಸೂರು – ೦೪ |
| ೧೩. | ನಂದಿ ಗಿರಿಧಾಮದಲ್ಲಿ ಗಾಂಧಿ | ೧೯೯೭ | **ವೇಮಗಲ್ ಸೋಮಶೇಖರ್**<br>ಸಾಹಿತ್ಯ ಮಂದಿರ – ೬<br>ಪ್ರತಿಭಾ ಪ್ರಿಂಟರ್ಸ್<br>ಹನುಮಂತ ನಗರ<br>ಬೆಂಗಳೂರು – ೧೯ |
| ೧೪. | ನವೋದಯ | ೧೯೭೬ | **ಜಿ.ಎಸ್. ಶಿವರುದ್ರಪ್ಪ**<br>ಶರದ್ ಪ್ರಕಾಶನ, ಸರಸ್ವತಿಪುರಂ<br>ಮೈಸೂರು |
| ೧೫. | ನಾಡ ಹಾಡುಗಳು | ೧೯೪೦ | **ಬುರ್ಲಿ ಬಿಂಧು ಮಾಧವ (ಸಂ.)**<br>ಬಿ.ಜಿ. ಅವಧಾನಿ<br>ಮಿಂಚಿನ ಬಳ್ಳಿ ಪ್ರಕಾಶನ<br>ಧಾರವಾಡ |
| ೧೬. | ಪರ್ಣಕುಟಿ | ೧೯೮೮ | **ಸಿದ್ಧವನಹಳ್ಳಿ ಕೃಷ್ಣಶರ್ಮ**<br>ಗಾಂಧಿ ಸಾಹಿತ್ಯ ಸಂಘ<br>ಜಿ. ಕಲ್ಲಯ್ಯ ಅಂಡ್ ಸನ್ಸ್<br>ಮಲ್ಲೇಶ್ವರಂ<br>ಬೆಂಗಳೂರು |

| | | | |
|---|---|---|---|
| ೧೭. | ಪೇಜಾವರ ಸದಾಶಿವರಾಯ ಸಾಹಿತ್ಯ ವಾಚಿಕೆ | ೧೯೯೫ | **ನಾ. ದಾಮೋದರ ಶೆಟ್ಟಿ**<br>ರಿಜಿಸ್ಟ್ರಾರ್<br>ಕರ್ನಾಟಕ ಸಾಹಿತ್ಯ ಅಕಾಡೆಮಿ<br>ಬೆಂಗಳೂರು – ೦೩ |
| ೧೮. | ಬಾಪೂದರ್ಶನ | ೧೯೪೯ | **ಆಕಾಶವಾಣಿ ಪ್ರಕಟಣೆ**<br>ವೇಸ್ಲಿ ಪ್ರೆಸ್<br>ಮೈಸೂರು |
| ೧೯. | ಬೇಂದ್ರೆಯವರು ಮತ್ತು ನವೋದಯ ಕಾವ್ಯ | ೧೯೮೮ | **ಶೇಷಗಿರಿರಾವ್ ಎಲ್.ಎಸ್.**<br>ಪ್ರಸಾರಾಂಗ<br>ಕರ್ನಾಟಕ ವಿಶ್ವವಿದ್ಯಾನಿಲಯ<br>ಧಾರವಾಡ |
| ೨೦. | ಮಹಾತ್ಮಾಗಾಂಧಿ – ೧೦೦ ವರ್ಷಗಳು | ೧೯೭೦ | **(ಕನ್ನಡ ಅನುವಾದ)**<br>**ಡಾ. ಎಚ್. ತಿಪ್ಪೇರುದ್ರಸ್ವಾಮಿ**<br>ಗಾಂಧೀಭವನ<br>ಮೈಸೂರು ವಿಶ್ವವಿದ್ಯಾನಿಲಯ<br>ಮಾನಸಗಂಗೋತ್ರಿ<br>ಮೈಸೂರು |
| ೨೧. | ರಾಷ್ಟ್ರೀಯತೆ ಮತ್ತು ಆಧುನಿಕ ಕನ್ನಡ ಸಾಹಿತ್ಯ | ೧೯೮೮ | **ಜಿ.ಎಸ್. ಶಿವರುದ್ರಪ್ಪ (ಸಂ.)**<br>ಕರ್ನಾಟಕ ಸಾಹಿತ್ಯ ಅಕಾಡೆಮಿ<br>ನೃಪತುಂಗ ರಸ್ತೆ, ಬೆಂಗಳೂರು – ೦೭ |
| ೨೨. | ಸಾಹಿತ್ಯ ಮತ್ತು ಸಾಮಾಜಿಕ ಪ್ರಜ್ಞೆ | ೧೯೭೭ | **ಜಿ.ಎಸ್. ಶಿವರುದ್ರಪ್ಪ (ಸಂ.)**<br>ಪ್ರಸಾರಾಂಗ<br>ಬೆಂಗಳೂರು ವಿಶ್ವವಿದ್ಯಾನಿಲಯ<br>ಬೆಂಗಳೂರು |
| ೨೩. | ಸಾಹಿತ್ಯ ಲೋಕದಲ್ಲಿ ಮಹಾತ್ಮಾ ಗಾಂಧಿ | ೧೯೯೩ | **ಶ್ರೀನಿವಾಸಯ್ಯ ಹೊ.**<br>ಕರ್ನಾಟಕ ಗಾಂಧೀ ಸ್ಮಾರಕ ನಿಧಿ<br>ಕುಮಾರ ಪಾರ್ಕ್ ಪೂರ್ವ<br>ಬೆಂಗಳೂರು – ೧ |
| ೨೪. | ಹೊಸಗನ್ನಡ ಸಾಹಿತ್ಯ | ೧೯೮೮ | **ಕನ್ನಡ ಸಾಹಿತ್ಯ ಪರಿಷತ್ತು**<br>ಚಾಮರಾಜಪೇಟೆ<br>ಬೆಂಗಳೂರು |
| ೨೫. | ವಿಜಯ ಕರ್ನಾಟಕ ದಿನಪತ್ರಿಕೆಯ ದಿ. ೩೦.೦೯.೨೦೦೧ರ ಸಾಪ್ತಾಹಿಕ ವಿಜಯ | ೨೦೦೧ | **ವಿಶ್ವೇಶ್ವರ ಭಟ್**<br>ಪ್ರಕಾಶಕರು ಮತ್ತು ಮಾಲೀಕರು<br>ವಿಜಯ ಸಂಕೇಶ್ವರ, ಹುಬ್ಬಳ್ಳಿ |

*******************